





ಮುಖಪುಟ
ಕಾಯಕಯೋಗಿ
ತ್ರಿವಿಧದಾಸೋಹಮೂರ್ತಿ ಪರಮಪೂಜ್ಯ
ಡಾ. ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರು
ಛಾಯಾಚಿತ್ರಗಳು : ಬಿ.ಸಿ. ಸುರೇಶ್


ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ದಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ದಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೨೩೬೦೪೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೦ ಏಪ್ರಿಲ್ ೨೦೦೪ ಸಂಚಿಕೆ : ೪

## ಒಳಪುಟಗಳಲ್ಲಿ..........




| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/- |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೬೦೦/- |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೫.೦೦ |



## ಲೋಕಕಂಡ ಸಿದ್ಧಗಂಗಾ ಶ್ರೀಗುರು ....

''ಅವರವರದರುಶನಕೆ ಅವರವರ ವೇಷದಲಿ ಅವರವರಿಗೆಲ್ಲಗುರು ನೀನೊಬ್ಬನೆ'' ಎಂಬುದು ಮುಪ್ಪಿನ ಷಡಕ್ಷರಿಗಳ ಭಕ್ತಿನುಡಿ ಅನುಭಾವದ ಬೆಳಕಿನಕಿಡಿ. ಸಿದ್ಧಗಂಗಾ ಶ್ರೀಗುರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳನ್ನು ಲೋಕಕಂಡಿರುವುದು ಹೀಗೆ – ನಡೆದಾಡುವ ದೇವರು, ಚಲಿಸುವ ದೇವಾಲಯ, ಕಾವಿಯುಡುಗೆಯನುಟ್ಟನಭ, ಸಿದ್ಧಗಂಗೆಯ ಬೆಳಕು, ದೀನದಲಿತರ ದಯಾಳು, ಗುರುಪರಂಪರೆಗೆ ಗಂಧವಿಟ್ಟ ಪುಣ್ಯಮೂರ್ತಿ, ಕಾಯಕಯೋಗಿ ದಾಸೋಹ ಚಕ್ರವರ್ತಿ, ಬಡವರಬಂಧು, ಅನಾಥರ ಆಪದ್ಬಾಂದವ, ಲಿಂಗಪೂಜಾ ನಿಷ್ಠೆಯ ಜಂಗಮಪ್ರಭು, ವೈರಾಗ್ಯವಿಭು, ಶಿಕ್ಷಣಶಿವಶಿಲ್ಪಿ, ಅಭಿನವ ಬಸವಣ್ಣ, ಭಕ್ತಿಜ್ಞಾನಕರ್ಮಗಳ ರತ್ನಮಣಿ, ಕಾವಿಗೆ ಕಿಮ್ಮತ್ತು ತಂದಮಠಾಧಿಪತಿ, ಅರಿವು-ಆಚಾರ-ಅನುಭಾವಗಳ ಸಂಗಮ, ವಿದ್ವತ್ತಿನ ವಿಂಧ್ಯಗಿರಿ, ಸೇವಾಸೂರ್ಯ, ಕರ್ನಾಟಕದ ಪುಣ್ಯ, ಭರತಖಂಡದ ಭಾಗ್ಯ, ಅವಿರಳ ರಾಷ್ಟ್ರಚಿಂತಕ, ಪ್ರವಚನ ಪವಿತ್ರಪರ್ವತ, ಜಾತಿ ಜಾಡ್ಯವನ್ನು ದೂರವಿರಿಸಿದ ಸಮಾಜವೈದ್ಯ, ಮಾನವಮಹಾದೇವ, ಬಸವ ತತ್ವಗಳ ಸಾಕಾರಶಿಲ್ಪಿ, ಪವಿತ್ರ ಜೀವನದ ತಪಸ್ವಿ, ಪ್ರಭಾವೀ ಸಂನ್ಯಾಸಿ, ನಿರಾಡಂಬರಮೂರ್ತಿ, ಸಿದ್ಧಗಂಗಾ ಸಿದ್ಧಗುರು, ದ್ರಷ್ಟಾರ-ಸೃಷ್ಟಾರ-ವಕ್ತಾರ, ಸಮನ್ವಯಯೋಗಿ, ಆಧುನಿಕ ಕುಲಪತಿ, ಸನಾತನ ಪ್ರದೀಪ, ದುರ್ಲಭಜನ್ಯರಾದ ಶ್ರೀಗಳು, ಮಹಾನ್ ಸಾಧಕ ಸಿದ್ಧಗಂಗಾಶ್ರೀ, ಅನ್ನದಾನ ವಿದ್ಯಾದಾನಗಳ ಸಂಗಮ, ಕರ್ತೃತ್ವಶಕ್ತಿಯ ಶ್ರೀಮಂತಸಾಕಾರ, ದೊಡ್ಡದೀಪ, ದೇವಪುರುಷ, ಕರ್ತವ್ಯನಿಷ್ಠ, ವಾತ್ಸಲ್ಯಶ್ರೀ, ದಿವ್ಯಚೇತನದ ಸಾಕಾರಮೂರ್ತಿ, ಪಾವನಸಂಗಮ, ಪ್ರತ್ಯಕ್ಷದೈವ, ಬೃಹತ್‌ಸಂಸಾರಿ, ಆನಂದರೂಪ, ಮೌನಚೇತನಶಕ್ತಿ, ಜಂಗಮಪರುಷ, ಆದರ್ಶಶಿಲ್ಪಿ, ಧ್ಯೇಯ ತಪಸ್ವಿ, ಬಸವತತ್ವಾರಾಧಕ, ದಿವ್ಯಚೇತನ, ಕಾರುಣ್ಯ ಹೃದಯಿ, ಅಸಾಮಾನ್ಯ ದಾಸೋಹಿ, ಆಚಾರವಿಚಾರಸಂಗಮ, ಮಹಾಋಷಿ, ಮಹಾತಪಸ್ವಿ, ಶರಣ ಸಂಸ್ಕೃತಿಯ ಬ್ರಹ್ಮಕಮಲ, ಆಪದ್ಬಾಂಧವ, ದೃಢಸಂಕಲ್ಪದ ಶ್ರೀಗಳು, ತಪೋಧನ, ಮಹಾಜಂಗಮ, ಆರಾಧ್ಯದೈವ, ಮಾತೃಹೃದಯಿ, ಶುದ್ಧಮೌನದ ಕಡಲು, ಶಿವತತ್ವರೂಹು, ದಿವದಕರಣ, ನಡೆನುಡಿಯ ಮಹಿಮ, ಸಹಸ್ರ ಸಹಸ್ರ ಹಸಿದ ಹೊಟ್ಟೆಗಳಿಗೆ ಅನ್ನವಿಕ್ಕಿದ ಬರಿಗೈಯ ಸರದಾರ, ಅಕ್ಷರ ಸಾಮ್ರಾಜ್ಯಕಟ್ಟಿ ಬೆಳೆಸಿದ ಶೂನ್ಯಸಿಂಹಾಸನಧೀರ, ಲಕ್ಷಮನೆಯ ಅಕ್ಷಯದ ಬೆಳಕು, ಪತಿತಿಜನೋದ್ಧರಣ, ಭವ್ಯಪರಂಪರೆಯ ದಿವ್ಯದೀಪ್ತಿ, ಪೃಥ್ವಿ ಆಗಸಗಳ ಬೆಸೆದುನಿಂತ ತ್ರಿವಿಕ್ರಮ, ಶುದ್ಧ ಅಪರಂಜಿ, ಆಧ್ಯಾತ್ಮದರವಿಂದ, ಮಿರುಗುವ ವಿಭೂತಿ, ಸದಸದ್ವಿವೇಕ ವಿಜ್ಞಾನಿ, ನಗುವ ನೀಲಾಗಸ, ಅಂಗಲಿಂಗಸಮೈಕ್ಯಯೋಗಾನಂದ, ದಲಿತರ ಕಲ್ಪತರು, ಕರ್ನಾಟಕದ ಬುದ್ಧ, ಉದ್ದಾಮಶಿವಜೀವಿ, ಉತ್ತುಂಗ ಅನುಭಾವಿ, ಆದರ್ಶ ಸುಸಮಾಜ ಸುರಭೂಜ, ಸತ್ಯಸಾಕ್ಷಾತ್ಕಾರ, ಸ್ಥಿತಪ್ರಜ್ಞೆ ಮಂದಾರ, ಸಾಹಿತ್ಯ ಸೌಂದರ್ಯನಿಧಿ, ಜಗದ ನಿಜಗುರು, ಶರಣಕುಲರನ್ನ, ಸೂರ್ಯಸಮತೇಜ, ಸಿದ್ಧಗಂಗೆಯ ಶಿವನಿಧಿ, ಸಿದ್ಧಗಂಗೆಯ ಸಿದ್ಧಪುರುಷ, ಬುವಿಗಿಳಿದಬಾನು, ಲೋಕತಾರಕಮೂರ್ತಿ, ಮಹಾಬೋಧಕ – ಈ ಒಂದೊಂದು ನುಡಿಗೆ ಒಡೆಯರಾದ ಶ್ರೀಗಳವರು ನಿರಾಡಂಬರ ನಿರಂಜನರು ಕನ್ನಡನಾಡು ತಪಿಸಿ ಕಂಡ ರಾಷ್ಟ್ರರತ್ನದೀಪ ಸ್ವರೂಪರು.

ಶ್ರೀಗಳವರಿಗೆ ತೊಂಬತ್ತಾರು ಸಂವತ್ಸರಗಳು ತುಂಬಿದುವು – ದಿನಾಂಕ ೧.೪.೨೦೦೪ಕ್ಕೆ ತೊಂಬತ್ತೇಳಕ್ಕೆ ಪಾದವಿಟ್ಟರು. ಬಾಗಿದ್ದಾರೆ. ಸೇವೆಯ ಶ್ರಮದ ಭಾರದಿಂದ ಬಾಗಿದ್ದಾರೆ. ನಡೆದಿದ್ದಾರೆ. ಇನ್ನೂ ಮಾಡಬೇಕೆಂದು ಮುನ್ನಡೆದಿದ್ದಾರೆ. ಇಂದೂ, ದಿನಕ್ಕೆ ನೂರಾರು ಕಿ.ಮೀ. ಪಯಣಿಸುತ್ತಾರೆ. ಘಂಟೆ ಗಟ್ಟಲೆ ಪ್ರವಚನ ನೀಡುತ್ತಾರೆ. ಎಂಟುಸಾವಿರ ಮಕ್ಕಳ ಹಾರೈಕೆ ಭಾರ ಹೊತ್ತಿದ್ದಾರೆ. ಕ್ಷೇತ್ರಾರ್ಥಿಗಳ ದುಃಖದುಮ್ಮಾನಗಳನ್ನು ಆಲಿಸುತ್ತಾರೆ. ಗಣ್ಯಮಾನ್ಯರೊಡನೆ ದೇಶಚಿಂತನೆ ಮಾಡುತ್ತಾರೆ. ರೈತಬಂಧುಗಳ ಕಷ್ಟ ಕಣ್ಣೀರುಗಳನ್ನು ಕಂಡು ಕರಗುತ್ತಾರೆ. ಜೂಜು, ಕುಡಿತಗಳ ಚಟದಿಂದ ಹಾಳಾಗುತ್ತಿರುವವರನ್ನು ಕಂಡು ಕೊರಗುತ್ತಾರೆ. ಅರಿತವರೊಂದಿಗೆ ಚರ್ಚಿಸುತ್ತಾರೆ. ಸಲಹೆ ನೀಡುತ್ತಾರೆ. ಎಳೆಯ ಮಕ್ಕಳನ್ನು ಮಾತಾಡಿಸಿ ನಗಿಸುತ್ತಾರೆ, ನಗುತ್ತಾರೆ. ನಡುರಾತ್ರಿನಂತರ ಎರಡೂ ಹದಿನೈದಕ್ಕೆ ಏಳುತ್ತಾರೆ. ಗಡಿಯಾರದೊಡನೆ ದುಡುದುಡು ನಡೆದು ಲೋಕ ಕಲ್ಯಾಣದಲ್ಲಿ ನಿರತರಾಗುತ್ತಾರೆ. ನಿಂದೆ ನಿಷ್ಠೂರಗಳನ್ನು ನುಂಗಿ ನಂಜುಂಡರಾಗಿದ್ದಾರೆ. ಬೆಳಗಿನೊಳಗಣ ಬೆರಗು ಎಂಬಂತೆ ಕಾಣಬಂದಿದ್ದಾರೆ. ನಾಡು ತಲೆಬಾಗಿ ಕೈಮುಗಿದು ನಮಿಸುತ್ತಿರುವ ಈ ಶುಭಗಳಿಗೆಯಲ್ಲಿ 'ಸಿದ್ಧಗಂಗಾ' ಅಕ್ಷರರೂಪಿಯಾಗಿ ನಮಸ್ಕರಿಸುತ್ತಿದೆ.

– ಸಂಪಾದಕ







## ಮನುಷ್ಯನನ್ನು ಪ್ರೀತಿಸುವುದೇ ಧರ್ಮ

ಮನುಷ್ಯ ಮನುಷ್ಯನಾಗಬೇಕಾಗಿದೆ. ಕೋಟಿವರ್ಷಗಳ ಅನುಭವವನ್ನು ಎಲ್ಲರ ಕಲ್ಯಾಣಕ್ಕಾಗಿ ಬಳಸಿಕೊಳ್ಳಬೇಕಾಗಿದೆ. ಕೋಟಿ ಕೋಟಿ ರೂಪಾಯಿಗಳನ್ನು ಖರ್ಚುಮಾಡಿ ಮಾರಕಾಸ್ತ್ರಗಳನ್ನು ತಯಾರಿಸುವ ನಾಗರಿಕತೆಯನ್ನು ಬಿಟ್ಟು ಮನಮನಗಳನ್ನು ಅರಳಿಸುವ ವೈಜ್ಞಾನಿಕ ಸಾಧನಗಳನ್ನು ರೂಪಿಸುವ ಅಗತ್ಯವಿದೆ. ಇಂದು ಯುದ್ಧವಿಲ್ಲ. ಆದರೆ ಯುದ್ಧ ವ್ಯಾಪಕವಾಗಿ ಹಬ್ಬಿಹರಡಿವೆ. ದೇಶ ದೇಶಗಳ ನಡುವೆ, ರಾಜ್ಯರಾಜ್ಯಗಳ ಮಧ್ಯೆ, ಜಿಲ್ಲೆ ಜಿಲ್ಲೆಗಳಲ್ಲಿ, ಊರುರುಗಳೊಳಗೆ, ಮನೆಮನೆಯಂಗಳದಲ್ಲಿ, ಮನಮನಗಳ ಅಂತರಾಳದಲ್ಲಿ ಯುದ್ಧ ವಿಸ್ತರಿಸಿದೆ. ಮಾನವೀಯತೆ ಸತ್ತುಹೋಗುತ್ತಿದೆ. ಭೂಮಿಯ ಮೇಲೆ ಕೇವಲ ಮನುಷ್ಯನೊಬ್ಬನೇ ಇಲ್ಲ. ಪ್ರಾಣಿಸಂಕುಲ, ಪಕ್ಷಿಸಮೂಹ, ಸಸ್ಯರಾಶಿ, ಜೀವಜಂತುಗಳೆಲ್ಲ ಇವೆ. ಎಲ್ಲವೂ ನೆಮ್ಮದಿಯಿಂದ ಬದುಕಬೇಕಾದರೆ ನಾವು ಒಂದನ್ನು ಅನುಸರಿಸಬೇಕು. ಅದು ಯಾವುದೆಂದರೆ ಧರ್ಮ. ಧರ್ಮ ಒಂದು ಬೆಳಕು. ಎಲ್ಲ ಬೆಳಕುಗಳಿಗಿಂತ ಶ್ರೇಷ್ಠವಾದ ಬೆಳಕು. ಮನುಷ್ಯ ಧರ್ಮವನ್ನು ಹೊರಗಿಟ್ಟು ಏನನ್ನೇ ಸಾಧಿಸಿದರೂ, ಎಷ್ಟನ್ನೇ ಪಡೆದರೂ ಅದಕ್ಕೆ ಕಿಮ್ಮತ್ತಿರುವುದಿಲ್ಲ. ಅದು ಅವನ ಅಭ್ಯುದಯವನ್ನು ಸಾಧಿಸಿದಂತಾಗುವುದಿಲ್ಲ. ಧರ್ಮ ಚರ್ಚೆಗೆ ನಿಲುಕುವಂಥದಲ್ಲ. ಚಿಂತನೆಗೆ ಹೊಳೆಯುವ ಬೆಳಕು. ಧರ್ಮಕ್ಕೆ ಅಹಂಕಾರಮಮಕಾರಗಳಿರುವುದಿಲ್ಲ. ಪ್ರೀತಿ ವಿನಯಗಳಿರುತ್ತವೆ. ಕೃತಜ್ಞತಾಭಾವನೆಯಿರುತ್ತದೆ. ಧರ್ಮವಿರುವಲ್ಲಿ – ಗ್ರಾಮೀಣ ಪ್ರದೇಶದಲ್ಲಿ ಇಂದು ಪ್ರಚಲಿತವಾಗಿರುವ ಬಡ್ಡಿ ವ್ಯವಹಾರ ಧರ್ಮವನ್ನು ಕಡೆಗಣಿಸಿದೆ. ಅಂತೆಯೇ ಲಾಟರಿ ಹುಚ್ಚಿನಿಂದ ಜನತೆ ಮಾನವೀಯತೆಯನ್ನೇ ಕಳೆದುಕೊಳ್ಳುತ್ತಿದೆ. ದುಡಿಮೆಯ ಬೆಲೆಯನ್ನರಿಯದ ಜನಾಂಗ ಸೃಷ್ಟಿಯಲ್ಲಿ ಸರ್ಕಾರ ದಾಪುಗಾಲು ಹಾಕುತ್ತಿವೆ. ಜನಾಂಗ ಹಾಳಾಗುತ್ತಿದೆ. ಭಗವಂತ ಪ್ರಸಾದಿಸಿರುವ ಮಾನವ ಜನ್ಮವನ್ನು ವ್ಯರ್ಥಮಾಡಿಕೊಳ್ಳುತ್ತಿದ್ದೇವೆ. ಅವನ ಅವಕೃಪೆಗೆ ಒಳಗಾಗುತ್ತಿದ್ದೇವೆ. ಅದರಿಂದಾಗಿ ಮಳೆ ಬೆಳೆಯಿಲ್ಲದೆ ಬರಗಾಲದ ಬವಣೆಯಿಂದ ಬಳಲುತ್ತಿದ್ದೇವೆ ಎಂಬ ಅರಿವಿಲ್ಲದವರಾಗಿದ್ದೇವೆ. ಧರ್ಮವನ್ನು ದಯೆಯ ತಳಹದಿಯ ಮೇಲೆ ಕಟ್ಟಿದವರು ಜಗತ್ತಿನ ಎಲ್ಲ ಧರ್ಮದೀಪಕರು. ಒಂದು ಪ್ರಸಂಗ ನೆನಪಾಗುತ್ತದೆ. ಒಂದೂರಿನಲ್ಲಿ ಒಬ್ಬ ಗೃಹಸ್ಥನಿದ್ದ. ಬಹಳ ಮಕ್ಕಳೊಂದಿಗ, ಬಡವನಾಗಿದ್ದ. ಅವನೊಮ್ಮೆ ಧರ್ಮಸಂಕಟದಲ್ಲಿ ಸಿಕ್ಕಿಕೊಂಡ. ತಮ್ಮೂರಿನ ವ್ಯಕ್ತಿಯೊಬ್ಬನ ವಿಷಯದಲ್ಲಿ ಅವನೊಂದು ಸುಳ್ಳು ಹೇಳಿದ್ದರೆ ಅವನು ಅಪಾರ ಐಶ್ವರ್ಯದ ಒಡೆಯನಾಗಬಹುದಿತ್ತು. ಅವನ ಮಕ್ಕಳೆಲ್ಲ ಹೇಳಿದರು ಒಂದು ಸುಳ್ಳು ಹೇಳುವುದರಿಂದ ಅಂತಹ ಪಾಪವೇನೂ ಬರಲಾರದು, ಹೇಳಿ ಎಂದು ಹಲವಾರು ಭಾರಿ ಹಲವಾರು ರೀತಿಯಲ್ಲಿ ಅಂಗಲಾಚಿದರು. ಆದರೇನು ಆತನದಕ್ಕೆ ಒಪ್ಪದೇ ಹೋದ. ಅವರು ಧರ್ಮರಾಯನಂಥವನೇ ಕುರುಕ್ಷೇತ್ರ ಯುದ್ಧದಲ್ಲಿ ಸುಳ್ಳೂ ಹೇಳಿದನಂತೆ ನಿಮ್ಮದೇನು? ಹೇಳಿ ಎಂದು ಗೋಗರೆದರು. ಆ ಗೃಹಸ್ಥ ಒಪ್ಪಲಿಲ್ಲ. ಏಕೆಂದರೆ ಅವನು ಧರ್ಮಿಷ್ಠನೆನಿಸಿದ್ದ. ಧರ್ಮ ಸುಳ್ಳನ್ನು ಸಹಿಸುವುದಿರಲಿ ಹತ್ತಿರವೂ ಬಿಟ್ಟುಕೊಳ್ಳುವುದಿಲ್ಲ. ಇಂದು ಧರ್ಮವನ್ನು ವ್ಯಾಪಾರಮಾಡಿಕೊಳ್ಳಲಾಗಿದೆ. ಮನುಷ್ಯ 'ಮನುಷ್ಯನನ್ನು ಪ್ರೀತಿಸುವುದೇ ಧರ್ಮ' ಎಂಬ ಸಾರ್ವಕಾಲಿಕ ಸತ್ಯವನ್ನು ಅರಿತಾಗಲೇ ಜಗತ್ತಿಗೆ ಶಾಂತಿ.

*

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಭವನಾಶಿನಿಯೆಂಬ ಶಿವಾಣಿಯ ಶಿರಸ್ಸಿನಲ್ಲಿ*
*ಜಗಜ್ಯೋತಿಯ ಕಂಡೆನಯ್ಯಾ*
*ಅದು ಹಗಲಿರುಳನರಿಯದೆ ಜಗಜಗಿಸುತ್ತಿದ್ದಿತ್ತು ನೋಡಾ*
*ಜಗಜ್ಯೋತಿಯ ಬೆಳಗಿನೊಳಗೆ*
*ಅಗಣಿತ ಮಹಿಮನಿದಾನೆ ನೋಡಾ.*
*ಅಪ್ರಮಾಣ ಲಿಂಗದೊಳಗೆ ನಾನಿರ್ದೆನು ಕಾಣಾ*
*ಅನುಪಮ ಮಹಿಮ ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !*

ಭವಭವಗಳಲ್ಲಿ ಬರುವ ಜನ್ಮವನ್ನು ನಷ್ಟವ ಮಾಡುವ ಶಿವಮಂತ್ರ ಸ್ಮರಣೆಗೈವ ಶರಣನ ಸುಜ್ಞಾನ ಶಿರಸ್ಸಿನಲ್ಲಿ ಸ್ವಯಂ ಜ್ಯೋತಿಪ್ರಕಾಶವನ್ನು ಜ್ಞಾನದ ಕಣ್ಣಿನಿಂದ ಕಂಡೆನು. ಅಂತಹ ಜಗದ್ಭಾಸಕವಾದ ಸ್ವಯಂಜ್ಯೋತಿಯು ಹಗಲಿರುಳು ಜ್ಞಾನಾ ಜ್ಞಾನಗಳೆಂಬುವ ಅವಸ್ಥಾರಹಿತವಾಗಿ ಚಕಚಕಾಯವಾಗಿ ಪ್ರಕಾಶಿಸುತ್ತಿದೆ. ಆ ಪರಿಪೂರ್ಣ ಸ್ವಯಂಜ್ಯೋತಿಯ ಬ್ರಹ್ಮದ ಬೆಳಗಿನಲ್ಲಿ ಗಣಿಸಲಾಗದ ಮಹತ್ವಾತಿಶಯನಾದ ಶಿವಶರಣನು ಏಕಾರ್ಥವಾಗಿ ನಿಂದಿದ್ದಾನೆ. ಪರಮಾತೀತವಾದ ಲಿಂಗದಲ್ಲಿ ಶರಣಲೀನನಾಗಿರ್ದಾನೆ. ಊಹೆಗೂ ನಿಲುಕದ ಪರಶಿವಲಿಂಗ ದಲ್ಲಿ ಶರಣನಡಗಿದ್ದು ಅನುಪಮ ಮಹಿಮನೆನಿಸಿದ್ದಾನೆ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ - ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

**ಶ್ರೀವಾಣಿ**

ಮಾತಿಗೆ ಮನೆ ಕಟ್ಟಿ ಬೆಳಗಿಸುವ, ಮನೆ ಸುಟ್ಟು ಬೂದಿಮಾಡುವ ಎರಡೂ ಶಕ್ತಿಗಳಿವೆ, ಇದನ್ನರಿತ ಮಾನವ ಮಾತನ್ನ ಮಾನವೀಯತೆ ಯಿಂದ ಬಾಳಲು ಸೃಷ್ಟ್ಯಾತ್ಮಕ ಶಕ್ತಿಯನ್ನಾಗಿ ಉಪಯೋಗಿಸಬೇಕು.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಮಹವೆ ನೀನಾಗಿದ್ದು ಮಹವನೆ ನೆನೆದಿರುವೆ
ಮಹಕೆ ಮಹವಾಗಿ ನಗುತಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನರಜನ್ಮ ಮಹವೆಂದೆ ಹರಜನ್ಮಮಾಡೆಂದೆ
ನರನೆ ಹರನಾಗುವುದ ಕಲಿಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಂಚಪರುಷದ ಪರಮ ನಿರುತ ನಿರಂಜನ
ಪಂಚಾಚಾರವೆ ಪುರುಷರೂಪಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನೆನೆವುದೆ ನನಗೆ ಪರಮಲಿಂಗಾರ್ಚನೆ
ನಿಮ್ಮ ನೆನೆವುದೆ ನನಗೆ ಪರತತ್ವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆನಗೆ ಬಸವಣ್ಣ ನೀವೆನಗೆ ಪ್ರಭುದೇವ
ನೀವೆ ಆಗಿರುವಿರಿ ಚನ್ನಬಸವಣ್ಣ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕತ್ತಲೆಯ ಬಸಿರೊಳಗೆ ರವಿತಾನು ಹೋಗುವಂತೆ
ಸುತ್ತಮುತ್ತಿದ ಜಗದಿ ನಡೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ದಾಸೋಹದ ಮಹಿಮೆಯನೇನೆಂಬೆ
ವೇದಾದಿಗಳಿಗೆ ಅರಿದೆಂಬೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಾದತೀರ್ಥವ ನೀಡಿ ಒಳಹೊರಗಮಡಿಗೈವ
ಪಾಪರಹಿತನಮಾಡಿ ಹರಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯ ಶುದ್ಧವ ಮಾಡಿ ಮನವ ನಿರ್ಮಲಗೈದು
ಅಂತರಂಗವ ಬೆಳಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನು ನಿಂದಲ್ಲಿ ಕಲ್ಯಾಣವರಳಿತು
ನೀನು ನಡೆದಲ್ಲಿ ಕಲ್ಯಾಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





## ಎಚ್ಚರದ ಕನಸಿನ ನಿಚ್ಚ ಕಾಯಕಯೋಗಿ

- ಗೊ.ರು. ಚನ್ನಬಸಪ್ಪ
ಪ್ರಸಿದ್ಧ ಸಾಹಿತಿಗಳು ಮತ್ತು ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಬೆಂಗಳೂರು.



*"ಕಣ್ಣು ಮೀಸಲು ಶಿವನ, ಕೈ ಮೀಸಲು ಶಿವನ*
*ಕಾಲು ಮೀಸಲು ಶಿವನ, ನಾಲಿಗೆ ಮೀಸಲು ಶಿವನ*
*ಕಿವಿ ಮೀಸಲು ಶಿವನ, ನಾಸಿಕ ಮೀಸಲು ಶಿವನ*
*ತನು ಮನವೆಲ್ಲ ಮೀಸಲು ಶಿವನ*
*ಈ ಮೀಸಲು ಬೀಸರವೊಗದಂತಿರ್ದಡೆ*
*ಆತನೇ ಜಗದೀಶ ಕಾಣಾ, ರಾಮನಾಥ".*

ಹನ್ನೆರಡನೆ ಶತಮಾನದ ಪೂರ್ವಾರ್ಧ ಕಾಲಮಾನದ ಶರಣ ಜೇಡರ ದಾಸಿಮಯ್ಯ ನುಡಿದ ಈ ವಚನಕ್ಕೆ ವ್ಯಾಖ್ಯಾನವಾಗಿರುವ ದಿವ್ಯ ಚೇತನ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ಬಹುಶಃ ೨೦-೨೧ನೆಯ ಶತಮಾನಗಳಲ್ಲಿ ಕನ್ನಡ ನೆಲ ಕಂಡ ಒಂದು ಅದ್ವಿತೀಯ ಜಂಗಮಜ್ಯೋತಿ. ಆ ಜ್ಯೋತಿಯ ಬೆಳಕಿನಲ್ಲಿ ಅಡ್ಡಾಡುವ ಅವಕಾಶ ಪಡೆದವರು ನಾವು.

### *ಹಿಮಾಲಯ ಸದೃಶ*

ಶ್ರೀ ಸಿದ್ಧಗಂಗಾಕ್ಷೇತ್ರ, ನಮ್ಮ ನಾಡಿನ ಅನ್ನ ಮತ್ತು ಜ್ಞಾನ ದಾಸೋಹಗಳ ಪ್ರಸಿದ್ಧ ಧಾರ್ಮಿಕ ಕೇಂದ್ರ. ಆರು ಶತಮಾನಗಳ ಇತಿಹಾಸ ಪಡೆದಿರುವ ಈ ಪಾವನ ಕ್ಷೇತ್ರದಲ್ಲಿ ಕಳೆದ ಏಳು ದಶಕಗಳಿಂದ ಪೂಜ್ಯ ಶ್ರೀಗಳು ನಡೆಸಿರುವ ಮಾನ ಸೇವಾ ಕಾರ್ಯ ಹಿಮಾಲಯ ಸದೃಶ. ಕಣ್ಣಾರೆ ಕಾಣದವರು ನಂಬಲಾಗದ ವಿಶೇಷ. ಶ್ರೀಮಠದಲ್ಲಿ ಎಂಟು ಸಾವಿರಕ್ಕೂ ಹೆಚ್ಚು ಗ್ರಾಮೀಣ ಬಡ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿಗಳ ವ್ಯವಸ್ಥೆ ಕಲ್ಪಿಸಲಾಗಿದೆ ಎಂದರೆ ಅದು ಸಾಧಾರಣ ಸಂಗತಿಯಲ್ಲ. ಪ್ರತಿನಿತ್ಯ, ಇಷ್ಟು ಸಂಖ್ಯೆಯ ವಿದ್ಯಾರ್ಥಿಗಳೇ ಅಲ್ಲದೆ ಸಾವಿರಾರು ಸಂಖ್ಯೆಯ ಯಾತ್ರಾರ್ಥಿಗಳಿಗೂ ಅನ್ನದಾಸೋಹ ನಡೆಯುತ್ತಿದೆ ಎಂದರೆ, ಅದು ಸಾಧ್ಯವೇ ಎನಿಸೀತು. ಆದರೆ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಸಂಕಲ್ಪ ಶಕ್ತಿ ಅದನ್ನು ಸಾಧ್ಯಮಾಡಿದೆ.

**ಶ್ರೀವಾಣಿ**

*ಜೀವನ ಒಂದು ಕ್ರಿಯಾಕ್ಷೇತ್ರ. ಇಲ್ಲಿ ಕರ್ಮಶೀಲರಾಗಿ ಬದುಕುವುದು ಮುಖ್ಯ. ದುಡಿಮೆಗೆ ಇಲ್ಲಿ ಪ್ರಾಮುಖ್ಯತೆ. ದುಡಿಮೆ ಸತ್ಯಶುದ್ಧವಾಗಿರಬೇಕು, ಪರಹಿತಮುಖಿಯಾಗಿರಬೇಕು.*



ಕಛೇರಿ ಕಾರ್ಯದಲ್ಲಿ ನಿರತರಾಗಿರುವ ಪರಮಪೂಜ್ಯ ಶ್ರೀ ಶ್ರೀಗಳವರು



ವಿದ್ಯಾರ್ಥಿಗಳ ದಾಖಲಾತಿ – ಪೂಜ್ಯ ಶ್ರೀಗಳವರಿಂದ ಅರ್ಜಿಗಳ ಪರಿಶೀಲನೆ

ಬಹುಶಃ ಸಿದ್ಧಗಂಗಾ ಮಠದ ಅನ್ನ ಮತ್ತು ಅಕ್ಷರದ ಆಶ್ರಯ ದೊರೆಯದೆ ಇದ್ದಿದ್ದರೆ, ಲಕ್ಷಾಂತರ ಗ್ರಾಮೀಣ ಮಕ್ಕಳು ಶಿಕ್ಷಣಾವಕಾಶದಿಂದ ವಂಚಿತರಾಗಬೇಕಾಗಿತ್ತು; ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದು ಬಡತನದ ಬೆಂಕಿಯಲ್ಲಿ ಬೇಯಬೇಕಾಗಿತ್ತು. ಅಲ್ಲಿ ಆಶ್ರಯ ಪಡೆದ ಪ್ರತಿಯೊಬ್ಬ ವಿದ್ಯಾರ್ಥಿಗೂ, ಆ ವಿದ್ಯಾರ್ಥಿಯ ಕುಟುಂಬಕ್ಕೂ ಈ ಮಾತಿನ ಸತ್ಯ ಉಳಿದವರಿಗಿಂತ ಹೆಚ್ಚು ಅರ್ಥವಾದೀತು.

*ಬೃಹತ್ ಸಮಾಜ ಸೇವಾಕೇಂದ್ರ*

ಸಿದ್ಧಗಂಗಾ ಕೇವಲ ಸಾಂಪ್ರದಾಯಿಕ ಮಠವಲ್ಲ. ಸಮಕಾಲೀನ ಜನಸಮುದಾಯಕ್ಕೆ ನಿಜವಾದ ಸೇವೆ ಸಲ್ಲಿಸುತ್ತಿರುವ ಒಂದು ಬೃಹತ್ ಸಮಾಜ ಸೇವಾ ಕೇಂದ್ರ. ಬಿಸಿಲಲ್ಲಿ ಬಳಲುವ ಬಡವರಿಗೆ ನೆರಳಿನ ಮನೆ. ಬಾಯಾರಿಕೆಯಿಂದ ಆಯಾಸಗೊಂಡವರಿಗೆ ತಂಪಾದ ಜಲ. ಅಲ್ಲಿ ನೂರಕ್ಕೆ ತೊಂಬತ್ತೊಂಬತ್ತರಷ್ಟು ಬಡಮಕ್ಕಳೇ ಆಶ್ರಯ ಪಡೆದಿದ್ದಾರೆ. ಬಡವರ ಬಗೆಗೆ ಶ್ರೀಗಳಿಗೆ ಇರುವಷ್ಟು ಕನಿಕರವನ್ನು, ಬಡವರ ಹಸಿವಿನ ಬಿಸಿಯನ್ನು ಕರುಳಿನ ಕೊರಗನ್ನು, ನಾಡಿನ ಮಿಡಿತವನ್ನು ಅವರಂತೆ ಅರ್ಥಮಾಡಿಕೊಂಡವರನ್ನು ಕಾಣುವುದು ವಿರಳವೆಂದೇ ಹೇಳಬಹುದು.

*ಬಸವಣ್ಣನ ಸಿದ್ಧಾಂತದ ಅನುಷ್ಠಾನ*

ಪೂಜ್ಯ ಸ್ವಾಮೀಜಿ ಅವರು ಪೂರ್ಣವಾಗಿ ಹನ್ನೆರಡನೆಯ ಶತಮಾನದ ಕಲ್ಯಾಣಕ್ರಾಂತಿಯ ಕಾರಣಪುರುಷ ಬಸವಣ್ಣನ ಸಿದ್ಧಾಂತಕ್ಕೆ ಬದ್ಧರಾದವರು. ಅವರು ಹೆಜ್ಜೆ ಹೆಜ್ಜೆಗೆ ಶಿವಶರಣರ ನುಡಿ-ನಡೆಗಳನ್ನು ನೆನೆಯುತ್ತಾರೆ; ನಡೆಯುತ್ತಾರೆ.

*ಎಚ್ಚರದ ಕನಸು*

ಜೀವಸಹಜ ಕನಸು ಕಾಣುವ ಅನುಭವ ನಮಗೆಲ್ಲ ಇದೆ. ನಮ್ಮದು ನಿದ್ದೆಯಲ್ಲಿ ಕಾಣುವ ಕನಸು. ಪೂಜ್ಯ ಸ್ವಾಮೀಜಿ ಅವರೂ ಕನಸು ಕಾಣುತ್ತಾರೆ. ಆದರೆ ಅವರದು ಎಚ್ಚರದಲ್ಲಿ ಕಾಣುವ ಕನಸು. ನಿದ್ರಾವಸ್ಥೆಯಲ್ಲಿ ಕಂಡ ಕನಸುಗಳು ಕೇವಲ ಭ್ರಮೆಯಾಗಿಯೋ ಭಯಾನಕವಾಗಿಯೋ ಕಾಣಿಸಿಕೊಂಡು ಮರೆಯಾಗುವಂತಹವು. ಆದರೆ ಜಾಗ್ರತಾವಸ್ಥೆಯ ಕನಸು ಹಾಗಲ್ಲ. ಪೂಜ್ಯ ಸ್ವಾಮೀಜಿ ಅವರದು ಅಂತಹ ಎಚ್ಚರದ ಕನಸು. ನನಸಾಗುವ ಕನಸು. ಪೂಜ್ಯರ ಕನಸೆಂದರೆ ಚಿಂತನೆ, ಯೋಜನೆ,

**ಶ್ರೀವಾಣಿ**

*ಅಶಿಸ್ತು ಎಲ್ಲಾ ಕಡೆ ವ್ಯಾಪಕವಾಗಿದೆ, ಶಿಸ್ತು ಕಡಿಮೆ. ಅದು ನಮ್ಮ ದೇಶದ ಸಂಸ್ಕೃತಿಗೆ ಕಳಂಕಪ್ರಾಯ. ಮಹೋನ್ನತ ಸ್ಥಾನಗಳಿಸಲು ಮಹತ್ತರ ಸಾಧನೆ ಅಗತ್ಯ. ಯಾರ ಜೀವನದಲ್ಲಿ ಶಿಸ್ತು ಅಗೋಚರ; ಅಂಥ ಜೀವನ ಸಾಮಾನ್ಯವಾದ ಜೀವನ, ವ್ಯರ್ಥವಾದ ಜೀವನ.*






ಪರಮಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಬಸವ ಜಯಂತಿ ಕಾರ್ಯಕ್ರಮ

ನಿರ್ಮಾಣ ಮತ್ತು ನಿರ್ವಹಣೆ. ಅವರು ಹೆಚ್ಚಾಗಿ ಕಣ್ಣುಮುಚ್ಚಿಕೊಂಡೇ ಇರುವುದನ್ನು ನಾವು ಗಮನಿಸಬಹುದು. ಆದರೆ ಅವರು ಎಚ್ಚರವಾಗೇ ಇರುತ್ತಾರೆ. ಆ ಎಚ್ಚರದಲ್ಲೇ ಲೋಕ ಜೀವನ ಸುಧಾರಣೆಯ ಕನಸು ಕಾಣುತ್ತಾರೆ. ಕಂಡ ಕನಸನ್ನು ಕೃತಿಗೊಳಿಸುತ್ತಾರೆ. ಸುಪ್ತಾವಸ್ಥೆಯಲ್ಲೂ ಜಾಗೃತವಾಗಿರುವ ಶಿವಯೋಗ ಅವರದು; ಕಾಯಕಯೋಗ ಅವರದು.

*ಜನಜಾಗೃತಿ*

ಪೂಜ್ಯರು ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿಯಾದರೂ, ಅವರಿಗೂ ತುಂಬ 'ಆಸೆ'ಗಳಿವೆ ಎಂದರೆ ಆಶ್ಚರ್ಯವೆನಿಸಬಹುದು! ಅವರ ಆಸೆಗಳೆಂದರೆ ಸಮುದಾಯದಲ್ಲಿ ಧಾರ್ಮಿಕ ಪ್ರಜ್ಞೆ ಬೆಳೆಯಬೇಕು, ಮಠಾಧೀಶರು ಆಧ್ಯಾತ್ಮಿಕ ಸಾಧನೆ ಮಾಡಬೇಕು, ನಮ್ಮ ರಾಜಕೀಯ ಕ್ಷೇತ್ರ ಶುದ್ಧವಾಗಬೇಕು, ಶಿಕ್ಷಣ ಕ್ಷೇತ್ರ ಅರ್ಥಪೂರ್ಣವಾಗಬೇಕು, ನಿರುದ್ಯೋಗ ನಿವಾರಣೆಯಾಗಬೇಕು, ಯುವಜನಾಂಗ ರಾಷ್ಟ್ರೀಯ ದೃಷ್ಟಿ ಬೆಳೆಸಿಕೊಳ್ಳಬೇಕು ಶ್ರಮಜೀವಿಗಳಿಗೆ ಮನ್ನಣೆ ದೊರಕಬೇಕು, ಜಾತಿ-ವಿಜಾತಿಗಳ ಭೇದ ಅಳಿಯಬೇಕು, ಗ್ರಾಮೀಣರ ಬದುಕಿನಲ್ಲಿ ನೆಮ್ಮದಿ ಮೂಡಬೇಕು, ಸಾಂಸ್ಕೃತಿಕ ಪರಿಸರ ನಿರ್ಮಾಣವಾಗಬೇಕು, ಒಟ್ಟಾರೆ ವಿಶ್ವದಲ್ಲಿ ಭಾರತದ ಘನತೆ ಗೌರವಗಳು ಹೆಚ್ಚಬೇಕು. ಈ ಆಸೆಗಳ ಈಡೇರಿಕೆಗಾಗಿ ಜನ ಜಾಗೃತಿಯ ದೀಕ್ಷೆವಹಿಸಿದ್ದಾರೆ ಪೂಜ್ಯ ಸ್ವಾಮೀಜಿ ಅವರು.



ಶ್ರೀಮಠದಲ್ಲಿ ಬಸವಣ್ಣನವರ ಆದರ್ಶ - ಸಿದ್ಧಾಂತಗಳ ಅನುಷ್ಠಾನ

*ಗ್ರಾಮಾಂತರ ಬಸವ ಜಯಂತಿ*

ದೀನದಲಿತರ ಮಧ್ಯೆ ಧೂಳಿನಲ್ಲಿ ಅಡ್ಡಾಡಿ, ನೊಂದ ಬದುಕುಗಳಿಗೆ ಸಾಂತ್ವನ ಹೇಳಿ, ಅವರಲ್ಲಿ ಆತ್ಮವಿಶ್ವಾಸ ತುಂಬುವ ಮಹಾಮಣಿಹ ಪೂಜ್ಯ ಸ್ವಾಮೀಜಿ ಅವರದು. ಸಾಮಾಜಿಕ ನ್ಯಾಯದ ಬಗೆಗೆ ಸಾರ್ವಜನಿಕ ಪ್ರಜ್ಞೆ ಮೂಡಿಸಲು ಹಗಲಿರುಳೆನ್ನದ ದುಡಿಮೆ ಅವರದು. ಲೋಕ ಶಿಕ್ಷಣಕ್ಕಾಗಿಯೇ ಅವರು ಕೈಗೊಂಡಿರುವ ಒಂದು ವಿಶಿಷ್ಟ ಕಾರ್ಯಕ್ರಮವೆಂದರೆ ಗ್ರಾಮಾಂತರ ಬಸವ ಜಯಂತಿ. ಜನ ಸಮೂಹದಲ್ಲಿ ಧಾರ್ಮಿಕ ಶ್ರದ್ಧೆ, ಕಾಯಕ ನಿಷ್ಠೆ, ದಾಸೋಹ ದೃಷ್ಟಿ, ಸಮಾನತಾ ಭಾವನೆಗಳನ್ನು ಬಿತ್ತಿ ಬೆಳೆಯುವಲ್ಲಿ ಈ ಬಸವ ಜಯಂತಿಗಳು ವಹಿಸಿರುವ ಪಾತ್ರ ನಿಜಕ್ಕೂ ಅನನ್ಯ. ಈ ಸಾಂಸ್ಕೃತಿಕ ಸಂದರ್ಭಗಳನ್ನು ಸಮಾಜ ಶಿಕ್ಷಣಕ್ಕಾಗಿ ಬಳಸಿಕೊಂಡಿರುವ ಕ್ರಮ ಉಳಿದ ಮಠಗಳಿಗೆ ಮಾದರಿ.

*ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ*

ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದೃಷ್ಟಿ ಇರುವುದೆಲ್ಲ ಹಳ್ಳಿಯ ರೈತ ಸಮುದಾಯದ ಜೀವನ ಸುಧಾರಣೆಯ ಬಗೆಗೆ; ಶ್ರೀಮಠದಲ್ಲಿ ಆಶ್ರಯ ಪಡೆಯುವ ಮಕ್ಕಳ ಯೋಗಕ್ಷೇಮದ ಬಗೆಗೆ. ರೈತರು ತಮ್ಮ ಕೃಷಿ ಮತ್ತು ಪಶುಪಾಲನೆ ಕಾಯಕವನ್ನು ವೈಜ್ಞಾನಿಕವಾಗಿ ಸುಧಾರಿಸಿಕೊಳ್ಳಲು ಅಗತ್ಯವಾದ ತಿಳಿವಳಿಕೆಯನ್ನು ಪಡೆಯಲು ಅನುಕೂಲವಾಗುವಂತೆ ಶ್ರೀ ಕ್ಷೇತ್ರದ ವಾರ್ಷಿಕ ಜಾತ್ರೆ ಸಂದರ್ಭದಲ್ಲಿ ಕೃಷಿ-ಕೈಗಾರಿಕಾ ವಸ್ತುಪ್ರದರ್ಶನ ನಡೆಯುವಂತೆ ಮಾಡಿದ್ದಾರೆ. ದನಗಳ ಪರಿಷೆ ಸೇರುವಂತೆ ಮಾಡಿದ್ದಾರೆ. ಈ ವಾರ್ಷಿಕ ಪ್ರದರ್ಶನದ ಮಹತ್ವ ಮತ್ತು ಪರಿಣಾಮಗಳನ್ನು ಮನಗಂಡು ರಾಜ್ಯ ಸರ್ಕಾರವೂ ಜೊತೆಗೂಡಿರುವುದು ಸ್ವಾಗತಾರ್ಹ.

**ಶ್ರೀವಾಣಿ**

*ಮನಸ್ಸು ಪವಿತ್ರವಾದುದು. ಅದನ್ನು ಜೋಪಾನಮಾಡುವ ಕರ್ತವ್ಯ ನಮ್ಮದು. ಅದು ಅನ್ಯವಿಷಯಗಳತ್ತ ಹರಿದು ಹೋಗದಂತೆ, ದೀಪದ ಕುಡಿಯಂತೆ ಅಲುಗಾಡದಂತೆ ಯಾವಾಗಲೂ ಎಚ್ಚರವಾಗಿದ್ದು ಕಾಪಾಡಿಕೊಳ್ಳಬೇಕು.*



ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕದ ವೀಕ್ಷಣೆಯಲ್ಲಿ ಪೂಜ್ಯ ಶ್ರೀಗಳವರು



ದಾನಿಗಳು ನೀಡಿದ ವಸ್ತ್ರಗಳನ್ನು ಬಡವಿದ್ಯಾರ್ಥಿಗಳಿಗೆ ವಿತರಿಸುತ್ತಿರುವುದು

*ಹಳೆಯ ವಿದ್ಯಾರ್ಥಿಗಳ ಸಂಘ*

ಸಾರ್ವಜನಿ ಬದುಕಿನಲ್ಲಿ ನೈತಿಕ ಮೌಲ್ಯಗಳು ಕುಸಿಯುತ್ತಿರುವುದನ್ನು ಕಂಡು ವ್ಯಸನಪಡುವ ಸ್ವಾಮೀಜಿ ಅವರು, ಆ ನೈತಿಕ ಮೌಲ್ಯಗಳ ಪುನರುತ್ಥಾನಕ್ಕೆ ಶರಣ ಸಂಸ್ಕೃತಿಯೊಂದೇ ಮಾರ್ಗವೆಂದು ತಿಳಿಸಲು ಅನೇಕ ಚಟುವಟಿಕೆಗಳು ನಡೆಯುವಂತೆ ಮಾಡಿದ್ದಾರೆ. ಶ್ರೀಕ್ಷೇತ್ರದ ಎಲ್ಲ ಸೇವಾ ಚಟುವಟಿಕೆಗಳಲ್ಲೂ ಕ್ರಿಯಾಶೀಲ ಪಾತ್ರ ವಹಿಸಿರುವ ಹಳೆಯ ವಿದ್ಯಾರ್ಥಿಗಳ ಸಂಘ ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಕುರಿತ ಸಾಕ್ಷ್ಯಚಿತ್ರ ತಯಾರಿಸಿದೆ. ಪೂಜ್ಯ ಸ್ವಾಮೀಜಿ ಅವರ ಪೀಠಾಧಿಕಾರದ ರಜತ ಮಹೋತ್ಸವ, ಸುವರ್ಣ ಮಹೋತ್ಸವ, ವಜ್ರಮಹೋತ್ಸವಗಳ ಆಚರಣೆಗಳನ್ನು ಬೃಹತ್ ಪ್ರಮಾಣದಲ್ಲಿ ನಡೆಸಿದೆ. ಶತಮಾನೋತ್ಸವ ಆಚರಣೆಗೆ ಸಿದ್ಧತೆ ಮಾಡಿಕೊಳ್ಳುತ್ತಿದೆ. ಸಂಘವು ಪ್ರಕಟಿಸುತ್ತಿರುವ 'ಸಿದ್ಧಗಂಗಾ' ಮಾಸಪತ್ರಿಕೆ ಶರಣ ಸಂದೇಶ ಪ್ರಸಾರ ಮತ್ತು ಸಮಾಜ ಶಿಕ್ಷಣಕ್ಕೆ ನೀಡುರುವ ಒಂದು ಉಪಯುಕ್ತ ಕಾಣಿಕೆಯಾಗಿದೆ.

*ಶರಣ ಲೋಕ*

ಪೂಜ್ಯ ಸ್ವಾಮೀಜಿ ಅವರು ಈಗ ಮತ್ತೊಂದು ಮಹತ್ವದ ಯೋಜನೆಯ ನಿರ್ಧಾರ ಕೈಗೊಂಡಿದ್ದಾರೆ. ಅದೆಂದರೆ ಶರಣ ಸಂಸ್ಕೃತಿಗೆ ಸಂಬಂಧಿಸಿದ ಒಂದು ಬೃಹತ್ ವಸ್ತು ಸಂಗ್ರಹಾಲಯ ಸ್ಥಾಪನೆ; ಬೆಂಗಳೂರು-ತುಮಕೂರು ರಸ್ತೆಯಲ್ಲಿ ದಾಬಸ್‌ಪೇಟೆಯ ಹತ್ತಿರವಿರುವ ನಂದಿಹಳ್ಳಿಯಲ್ಲಿ ಶ್ರೀಮಠದ ವಿಶಾಲದೇಶದಲ್ಲಿ ಸ್ಥಾಪಿಸಲು ಉದ್ದೇಶಿಸಿರುವ 'ಶರಣಲೋಕ' ಮತ್ತು ಪ್ರದರ್ಶನ ರೂಪು-ರೇಖೆಗಳನ್ನು ನಾಡಿನ ಹಿರಿಯ ಸಂಶೋಧಕರಾದ ಡಾ. ಎಂ. ಚಿದಾನಂದ ಮೂರ್ತಿ ಅವರು ನೀಡಿದ್ದಾರೆ. ಈ ವಸ್ತು ಸಂಗ್ರಹಾಲಯ ಒಂದು ಐತಿಹಾಸಿಕ ದಾಖಲೆಯ ಮಹತ್ವದ ಕೇಂದ್ರವಾಗಲಿದೆ.

*ಶಿಕ್ಷಣ ಸಂಸ್ಥೆಗಳು*

ಶ್ರೀ ಸಿದ್ಧಗಂಗಾ ಮಠ ಒಂದು ರೀತಿಯಲ್ಲಿ ಲೋಕ ವಿಶ್ವವಿದ್ಯಾಲಯ. ಶ್ರೀಮಠದ ಆಶ್ರಯದಲ್ಲಿಪ್ರಾಥಮಿಕ ಪೂರ್ವ ಹಂತದಿಂದ ಸ್ನಾತಕೋತ್ತರ ಪದವಿ ಹಂತದವರೆಗೆ ಶಿಕ್ಷಣ ನೀಡುವ ನೂರಾರು ಶಿಕ್ಷಣ ಸಂಸ್ಥೆಗಳಲ್ಲಿ ಒಂದಾಗಿದೆ. ಶ್ರೀಮಠದ ತಾಂತ್ರಿಕ ಶಿಕ್ಷಣ ಕಾಲೇಜು ರಾಷ್ಟ್ರದಲ್ಲೇ ಹೆಸರು ಪಡೆದಿದೆ; ಅಂತಾ ರಾಷ್ಟ್ರೀಯ ಸಂಪರ್ಕ ಹೊಂದಿದೆ.

**ಶ್ರೀವಾಣಿ**

*ಭರತಖಂಡಕ್ಕೆ ಸುದೀರ್ಘ ಇತಿಹಾಸವಿದೆ. ಶ್ರೀಮಂತ ಸಂಸ್ಕೃತಿಯಿದೆ. ವಿಶ್ವಮಾನ್ಯ ಜೀವನ ಕ್ರಮವನ್ನು ರಾಷ್ಟ್ರ ತೋರಿಸಿಕೊಟ್ಟಿದೆ. ಶಾಂತಿಪ್ರಿಯ ದೇಶವಾಗಿದೆ.*



*ಅದ್ಭುತ ಸಾಧನೆ*

ಇಂದು ಶ್ರೀ ಸಿದ್ಧಗಂಗಾ ಕ್ಷೇತ್ರ, ಕನ್ನಡ ನಾಡಿನಲ್ಲೇ ಅಲ್ಲ, ದೇಶ ವಿದೇಶಗಳಲ್ಲಿ ಹೆಸರು ಮಾಡಿದೆ. ವಿದೇಶದ ಅನೇಕ ಗಣ್ಯರು ಇಲ್ಲಿ ನಡೆದಿರುವ ಸೇವಾಕಾರ್ಯಗಳನ್ನು ಕಂಡು ವಿಸ್ಮಯಗೊಂಡಿದ್ದಾರೆ. ಇಂತಹ ಅದ್ಭುತ ಸಾಧನೆಯ ಕೇಂದ್ರಶಕ್ತಿಯಾಗಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಮ್ಮ ತೊಂಬತ್ತೇಳನೆಯ ವಯಸ್ಸಿನಲ್ಲೂ ಸೋಲರಿಯದೆ ದುಡಿಯುತ್ತಿರುವುದು ನಿಜಕ್ಕೂ ಆಶ್ಚರ್ಯದ ಸಂಗತಿ.

*ಲೋಕಜಂಗಮ ಚೇತನ*

ಹೀಗೆ ಹಗಲಿರುಳೂ ಜನ ಸಮುದಾಯದ ಹಿತಚಿಂತನೆಯಲ್ಲಿ, ಕ್ಷೇಮ ಸಾಧನೆಯಲ್ಲಿ ತೊಡಗಿರುವ ಈ ಕಾಯಕಯೋಗಿಯನ್ನು ಅರ್ಥಮಾಡಿಕೊಳ್ಳದ ಕೆಲವು ವಿಕೃತ ಮನಸ್ಸುಗಳಿಂದ ಶ್ರೀಮಠದ ಅಭ್ಯುದಯಕ್ಕೆ ಆತಂಕ ಒಡ್ಡುವ ಪ್ರಯತ್ನಗಳೂ ನಡೆದಿರುವುದುಂಟ. ಆದರೆ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಸಂಕಲ್ಪಶಕ್ತಿ ಅಂತಹ ಎಲ್ಲಾ ತೊಂದರೆಗಳ ಬಂಧನವನ್ನು ದಾಟಿ ನಿಂತಿದೆ. ಏಕೆಂದರೆ ಅವರು ಲೋಕಜಂಗಮಚೇತನ. ಸಮಷ್ಟಿ ಹಿತವೊಂದೇ ಅವರ ದೃಷ್ಟಿ.

*ಮಾನವೀಯ ಕೊಡುಗೆಗಳು ಅಗತ್ಯ*

ಕೊನೆಯದಾಗಿ, ಪ್ರಸ್ತಾಪಿಸಲೇಬೇಕಾದ ಒಂದು ವಿಷಯವೆಂದರೆ, ಅದು ಶ್ರೀಮಠದ ಆಶ್ರಯದಲ್ಲಿ ಕಲಿಯುತ್ತಿರುವ ಸಹಸ್ರ ಸಹಸ್ರ ಮಕ್ಕಳ ಕ್ಷೇಮಕ್ಕೆ ಸಂಬಂಧಿಸಿದ್ದು. ಪೂಜ್ಯ ಸ್ವಾಮೀಜಿಯವರು ತಮ್ಮ ಜಂಗಮ ಜೋಳಿಗೆಯಿಂದ ಎಷ್ಟೆಲ್ಲ ಸಂಗ್ರಹಿಸಿ ತಂದರೂ ಇನ್ನೂ ಸಾವಿರಾರು ಮಕ್ಕಳಿಗೆ ಅಗತ್ಯವಾದ ಬಟ್ಟೆಬರೆಗಳು, ಪಠ್ಯ ಪುಸ್ತಕಗಳು, ಹಾಸಿಗೆ ಹೊದಿಕೆಗಳು, ಲೇಖನ ಸಾಮಗ್ರಿಗಳು ಇತ್ಯಾದಿಗಳ ಕೊರತೆಯಿದೆ. ಅಂತಹ ಮಕ್ಕಳನ್ನು ಕಂಡಾಗ ಪೂಜ್ಯ ಸ್ವಾಮೀಜಿ ಅವರು ಮಮ್ಮಲ ಮರುಗುತ್ತಾರೆ. ಉಳ್ಳವರು ಆ ಮಕ್ಕಳ ಕಷ್ಟಕ್ಕೆ ಆಗಬೇಕೆಂದು ಹಾರೈಸುತ್ತಾರೆ. ಅದನ್ನು ಗಮನಿಸಿ ಎಷ್ಟೋ ಸಹೃದಯಿಗಳು ಅನುಕಂಪ ತಾಳಿ ಮಕ್ಕಳಿಗೆ ಹೊದಿಕೆ, ತೊಡುವ ಬಟ್ಟೆ, ಪುಸ್ತಕಗಳು ಮತ್ತಿತರ ವಸ್ತುಗಳನ್ನು ಕೊಡುಗೆಯಾಗಿ ನೀಡಿರುವುದುಂಟು. ಅಂತಹ ಮಾನವೀಯ ಕೊಡುಗೆಗಳ ಅಗತ್ಯ ಶ್ರೀಮಠಕ್ಕೆ ಬಹಳವಿದೆ. ಇದು ಎಷ್ಟು ಪ್ರಮಾಣದಲ್ಲಿ ಹರಿದು ಬಂದರೂ ಸಾಲದು.

*ಸರ್ವಧರ್ಮ ಸಮನ್ವಯ*

ಶ್ರೀಮಠದ ಆವರಣದಲ್ಲಿ ಅಲ್ಲಿನ ಶಾಲಾ ಕಾಲೇಜು ಮಕ್ಕಳಿಗಾಗಿಯೇ ಒಂದು ವೈದ್ಯಕೀಯ ಚಿಕಿತ್ಸಾ ಕೇಂದ್ರವನ್ನು ತೆರೆದಿದ್ದಾರೆ. ಈ ಕೇಂದ್ರಕ್ಕೂ ಉಳ್ಳವರು ಔಷಧ ಮತ್ತು ವೈದ್ಯಕೀಯ ಸಾಧನ ಸಲಕರಣೆಗಳನ್ನು ಕೊಡುಗೆಯಾಗಿ ನೀಡುವ ಅಗತ್ಯವಿದೆ ಶ್ರೀಮಠದಲ್ಲಿರುವ ಮತ್ತೊಂದು ಮಾನವೀಯ ಸೇವಾ ವ್ಯವಸ್ಥೆಯೆಂದರೆ ಅಂಗವಿಕಲರ ಶಿಕ್ಷಣ. ದುರದೃಷ್ಟವಶಾತ್ ಆಕಸ್ಮಿಕ ಅಂಗವಿಕಲತೆಗೆ ತುತ್ತಾದ ನೂರಾರು ಮಕ್ಕಳಿಗೆ ಅಲ್ಲಿ ಆಶ್ರಯ ಕಲ್ಪಿಸಲಾಗಿದೆ. ಈ ಅಂಗವೈಕಲ್ಯದ ಮಕ್ಕಳೂ ಸೇರಿದಂತೆ ಶ್ರೀಮಠದಲ್ಲಿ ಎಂಟು ಸಾವಿರ ಮಕ್ಕಳಿಗೂ ಯಾವುದೇ ಜಾತಿ ಭೇದವಿಲ್ಲದೆ ಸಮಾನ ಆಶ್ರಯ ಒದಗಿಸಲಾಗಿದೆ. ಕೆಲವ ಮಕ್ಕಳು ನೆರೆಯ ರಾಜ್ಯಗಳಿಂದಲೂ ಬಂದಿದ್ದಾರೆ.

ಶ್ರೀ ಸಿದ್ಧಗಂಗಾ ಕ್ಷೇತ್ರ, ನಿಜವಾಗಿಯೂ ಜನ ಸಾಮಾನ್ಯರ ಶ್ರದ್ಧಾಭಕ್ತಿಗಳ ಮೇಲೆ ನಿಂತಿರುವ ಕ್ಷೇತ್ರ. ಇದಕ್ಕೆ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಮ್ಮ ಕ್ಷೇತ್ರಾಧಿಕಾರದ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಹೇಳಿರುವ ಮಾತುಗಳೇ ಸಾಕ್ಷಿಯಾಗಿವೆ. : ''ಈ ಮಠಕ್ಕೆ ಯಾವುದೇ ದೊಡ್ಡ ಆದಾಯವಿಲ್ಲ. ಕೊಡುಗೈ ದಾನಿಗಳಿಂದ ಎಲ್ಲವೂ ನಡೆದುಕೊಂಡು ಹೋಗುತ್ತಿದೆ. ಕೊಡುವವರಲ್ಲಿ ಕೆಲವರು ಶ್ರೀಮಂತರಿರಬಹುದು. ಆದರೆ ಅದಕ್ಕಿಂತ ಮಿಗಿಲಾದುದು ಬಡಭಕ್ತರು ಕೊಡುವ ಸೇರು, ಪಾವು, ಕಾಳು, ಸೊಪ್ಪು, ತರಕಾರಿಗಳೇ ಮಹತ್ವದ ಕೊಡುಗೆ. ಅದಕ್ಕೂ ಮಿಗಿಲಾದುದು ಅವರ ಶ್ರದ್ಧಾಭಕ್ತಿ ಈ ಮಠಕ್ಕೆ ಆಸ್ತಿ!''

ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೭ನೆಯ ಜನ್ಮದಿನದ ಈ ಸಂದರ್ಭದಲ್ಲಿ ಅವರ ಸಾನ್ನಿಧ್ಯ ನಮ್ಮ ನಾಡಿಗೆ ನಿಡುಗಾಲ ದೊರೆಯುವಂತಾಗಲೆಂದು ಹಾರೈಸೋಣ.

★

## ಅನುಕರಣೀಯ ಸೇವೆ

ಗೋಸಲ ಸಿದ್ಧೇಶ್ವರರಿಂದ ಸಂಸ್ಥಾಪಿಸಲ್ಪಟ್ಟು ಎಡೆಯೂರು ಸಿದ್ಧಲಿಂಗೇಶ್ವರರು ಅನುಷ್ಠಾನ ಮಾಡಿದಂಥ ಪರಮಪುಣ್ಯ ತಪೋಭೂಮಿ, ಅವರಿಂದ ಆರಂಭಿಸಿ ಉದ್ದಾನ ಶಿವಯೋಗಿಗಳ ತನಕ ನಡೆದು ಬಂದ ಭವ್ಯ ಪರಂಪರೆಯ ಇಂದಿನ ಪೀಠಾಧ್ಯಕ್ಷರಾದ ಪರಮಪೂಜ್ಯ ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಾಡಿರುವಂಥ, ಈ ನಾಡಿಗೆ ಸಲ್ಲಿಸುತ್ತಿರುವಂಥ ಸೇವೆ ಅನನ್ಯವಾದುದು, ಅನುಕರಣೀಯವಾದುದು. ಅಂಥ ಅಪ್ರತಿಮವಾದ, ಅದ್ವಿತೀಯವಾದ ಸೇವೆಯನ್ನು ಪೂಜ್ಯರು ಮಾಡುತ್ತಿದ್ದಾರೆ.

- ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಸುತ್ತೂರು ವೀರಸಿಂಹಾಸನ ಮಹಾಸಂಸ್ಥಾನ, ಮೈಸೂರು

**ಶ್ರೀವಾಣಿ**

*ಮಹಿಳೆ ತನ್ನಲ್ಲಿ ಸುಪ್ತವಾಗಿರುವ ಮಾತೃಶಕ್ತಿಯನ್ನು ಪ್ರಜ್ವಲಿಸುವುದರ ಮೂಲಕ ಸುಸಂಸ್ಕೃತ ಜನಾಂಗ ನಿರ್ಮಾಣದಲ್ಲಿ ಕ್ರಿಯಾಶೀಲಳಾಗುವ ಅನಿವಾರ್ಯತೆ ಇಂದು ಅಗತ್ಯವಾಗಿದೆ.*



## ತೊಂಬತ್ತೇಳರ ಮಹಾತಪಸ್ವಿ

– ಎಸ್. ಬಸವಾರಾಧ್ಯ
ಮಾಜಿ ಅಧ್ಯಕ್ಷರು,
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ೧೮.

ಕರ್ನಾಟಕ ವೀರಶೈವ ಮಠಗಳಲ್ಲಿ ಸಿದ್ಧಗಂಗಾಮಠ ಎಲ್ಲ ದೃಷ್ಟಿಗಳಿಂದಲೂ ಮುಂಚೂಣಿಯಲ್ಲಿರುವುದು ಸರ್ವರಿಗೂ ತಿಳಿದ ಸಂಗತಿಯಾಗಿದೆ. ಇದಕ್ಕೆ ಕಾರಣೀಭೂತರಾದವರು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಎಂಬುದು ಲೋಕವಿದಿತವಾಗಿದೆ. ಸುಮಾರು ಎಪ್ಪತ್ತು ವರ್ಷಗಳ ಕಾಲ ನಿರಂತರವಾಗಿ ಶ್ರಮಿಸಿ ಶ್ರೀಮಠವನ್ನು ಈ ಹಂತಕ್ಕೆ ತಂದಿರುವ ಶ್ರೀಗಳವರ ಕರ್ತೃತ್ವಶಕ್ತಿ ಅಸಾಧಾರಣವಾದುದು, ಅನುಪಮವಾದುದು. ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ವ್ಯಕ್ತಿತ್ವದಿಂದ ತಪಸ್ಯಕ್ತಿಯಿಂದ ಸಿದ್ಧಗಂಗಾಮಠ ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿದೆ.



ಕಛೇರಿಯಲ್ಲಿ ಶ್ರೀ ಶ್ರೀಗಳು

ಭರತಖಂಡ ಧರ್ಮ ಪ್ರಧಾನವಾದ ದೇಶ. ಆರ್ಷೇಯ ಕಾಲದಿಂದ ವಿವಿಧ ಧರ್ಮಗಳ ಮಠಗಳು ಕರ್ನಾಟಕದಲ್ಲಿ ವಿಜೃಂಭಿಸಿರುವುದನ್ನು ಇತಿಹಾಸದಿಂದ ಕಂಡುಕೊಳ್ಳಬಹುದಾಗಿದೆ. ಈ ಮಠಗಳು ಈ ನಾಡಿನ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹತ್ತರವಾದ ಕಾರ್ಯಗಳನ್ನು ನಿರ್ವಹಿಸುತ್ತಾ ಬಂದಿರುವುದನ್ನು ಅಂಕಿ ಅಂಶಗಳಿಂದ ಸಾಬೀತುಪಡಿಸಬಹುದಾಗಿದೆ. ಈ ಮಠಗಳ ಪರಮೋದ್ದೇಶ ದೀನದಲಿತೋದ್ಧಾರ ಮತ್ತು ಮಾನವ ಕಲ್ಯಾಣವೇ ಆಗಿತ್ತು ಎಂಬುದು ಲೋಕವಿದಿತವಾದುದು.

ವೀರಶೈವ ಮಠಗಳ ತವರೂರಾದ ಕರ್ನಾಟದಕಲ್ಲಿ ಒಂದು ಕಾಲಕ್ಕೆ ಐದು ಸಾವಿರಕ್ಕೂ ಮಿಗಿಲಾದ ಮಠಗಳು ಇದ್ದುವೆಂದು; ಕಾಲಕ್ರಮೇಣ ಅವುಗಳ ಸಂಖ್ಯೆ ಇಳಿಮುಖವಾಗಿ ಇಂದು ಒಂದು ಸಾವಿರಕ್ಕೆ ಬಂದು ಇಳಿದಿದೆ ಎಂದೂ ಒಂದು ಸಮೀಕ್ಷೆಯಿಂದ ತಿಳಿದುಬಂದಿದೆ. ಎಲ್ಲ ವರ್ಗದ ಮಠಗಳು ಈ ಸಮೀಕ್ಷೆಯಲ್ಲಿ ಸೇರ್ಪಡೆಯಾಗಿವೆ. ಅಳಿದುಳಿದಿರುವ ಎಲ್ಲ ಮಠಗಳಿಗೂ ಮಕುಟಮಣಿಯಂತಿದೆ ಶ್ರೀ ಸಿದ್ಧಗಂಗಾಮಠ, ಇದು ಕಾಲ, ದೇಶ, ವರ್ತಮಾನಗಳನ್ನು ಮೀರಿ ಬೆಳೆದು ನಿಂತಿದೆ.

### ಶ್ರೀವಾಣಿ

''ಮನುಷ್ಯ ಹೇಡಿಯಾಗಬಾರದು. ಆತ್ಮವಿಶ್ವಾಸವುಳ್ಳವನಾಗಬೇಕು. ಒಂದಕ್ಕೆ ಹತ್ತು ಮಾಡುತ್ತೇನೆ ಎಂಬ ನಿಷ್ಠೆಯಿರಬೇಕು''
ಎಂಬ ನಮ್ಮ ಪೂಜ್ಯ ಗುರುಗಳ ವಾಣಿ ನಮ್ಮ ಜೀವನದ ಧ್ಯೇಯ.



ಶ್ರೀಮಠದ ವೈಶಿಷ್ಟ್ಯವಾದರೂ ಎಂತಹುದು? ಪ್ರಾಚೀನ ಭಾರತದ ವೇದಾಗಮೋಪನಿಷತ್ತುಗಳನ್ನು ಬೋಧಿಸುವ ಸಂಸ್ಕೃತ ವ್ಯಾಸಂಗಕ್ಕೂ ಶ್ರೀಮಠದಲ್ಲಿ ಅವಕಾಶ ಕಲ್ಪಿಸಲಾಗಿದೆ. ಅಷ್ಟೇ ಅಲ್ಲ, ಆಧುನಿಕ ವಿಜ್ಞಾನ ತಂತ್ರಜ್ಞಾನಗಳಿಗೆ ಸಂಬಂಧಿಸಿದ ಶಿಕ್ಷಣಕ್ಕೂ ಅವಕಾಶ ಕಲ್ಪಿಸಿರುವುದು ಶ್ರೀಮಠದ ವೈಶಿಷ್ಟ್ಯವಾಗಿದೆ. ಪ್ರಾಚೀನ ಮತ್ತು ಆಧುನಿಕ ವಿದ್ಯಾಭ್ಯಾಸ ಪದ್ಧತಿಗಳ ರಸಸೇತುವಂತಿದೆ. ಶ್ರೀ ಸಿದ್ಧಗಂಗಾಮಠ ನಾಡಿನಾದ್ಯಂತ ಅಸಂಖ್ಯಾತ ವಿದ್ಯಾರ್ಥಿಗಳಿಗೆ ಶಿಕ್ಷಣ, ಪ್ರಸಾದ, ವಸತಿ ಸೌಕರ್ಯ ಕಲ್ಪಿಸಿರುವ ನಭೂತೋ ನಭವಿಷ್ಯತೆ ಎಂಬಂತೆ ಕಾರ್ಯನಿರ್ವಹಿಸುತ್ತಿದೆ. ಇಂತಹ ಲೋಕೋತ್ತರ ಕಾರ್ಯಗಳನ್ನು ಸಾಕಾರಗೊಳಿಸುತ್ತಿರುವ ತ್ರಿವಿಧ ದಾಸೋಹಮೂರ್ತಿಗಳಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿಮಕುಮಾರ ಮಹಾಸ್ವಾಮಿಗಳವರ ದೈತ್ಯ ಪ್ರತಿಭೆಗೆ ದೈತ್ಯಶಕ್ತಿಗೆ ನಮೋ ನಮೋ ಎಂದು ನಮಿಸಿ ಶ್ರೀಗಳವರು ಶತಾಯುಗಳಾಗಲಿ ಎಂದು ದಯಾಮಯರಾದ ಪಾರ್ವತೀ ಪರಮೇಶ್ವರರನ್ನು ಅನನ್ಯ ಭಕ್ತಿಭಾವದಿಂದ ಪ್ರಾರ್ಥಿಸುತ್ತೇನೆ.

''ವಿದ್ಯಾವಿಹೀನಃ ಪಶುಃ'', ''ನಹಿಃ ಜ್ಞಾನೇನ ಸದೃಶಂ'' ಎಂಬ ಸಾರ್ವತ್ರಿಕ ಸಂದೇಶವನ್ನು ಸಾರಿದ ದಾರ್ಶನಿಕ ತಪಸ್ವಿಗೆ ಪ್ರಾಂಜಲ ಮನಸ್ಸಿನ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಗುರುಃ ಬ್ರಹ್ಮಾ ಗುರುಃ ವಿಷ್ಣೋ
ಗುರುದೇವೋ ಮಹೇಶ್ವರಃ
ಗುರುಸಾಕ್ಷಾತ್ ಪರಬ್ರಹ್ಮ
ತಸ್ಮೈಶ್ರೀ ಗುರುವೇ ನಮಃ

★

## ಅನುಭಾವ ಜ್ಯೋತಿ

ನಾಡಿನ ಪುಣ್ಯಕ್ಷೇತ್ರವಾದ ಶ್ರೀ ಸಿದ್ಧಗಂಗಾ ಕ್ಷೇತ್ರದ ಕೀರ್ತಿಯನ್ನು ರಾಷ್ಟ್ರೀಯ, ಅಂತರರಾಷ್ಟ್ರೀಯಮಟ್ಟಕ್ಕೇರಿಸಿದ ಹಿರಿಮೆ ತ್ರಿವಿಧ ದಾಸೋಹಿಗಳು, ಮಹಾನ್ ತಪಸ್ವಿಗಳು, ಕಾಯಕ ಯೋಗಿಗಳೂ ಆದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರದು. ಕಳೆದ ಆರು ದಶಕಗಳಿಂದ ಶ್ರೀಮಠದ ಸರ್ವಾಂಗೀಣ ಅಭಿವೃದ್ಧಿಗೆ ತಮ್ಮನ್ನು ಅರ್ಪಿಸಿಕೊಂಡಿರುವ ಪೂಜ್ಯ ಶ್ರೀ ಶ್ರೀಗಳವರು ಬಡವರ, ಹಿಂದುಳಿದವರ, ದೀನದಲಿತರ ಪಾಲಿಗೆ ಆರಾಧ್ಯ ದೈವವಾಗಿದ್ದಾರೆ.

ಜಗಜ್ಯೋತಿ ಬಸವಣ್ಣನವರ ಸಿದ್ಧಾಂತಗಳನ್ನು, ಆದರ್ಶಗಳನ್ನು ಶ್ರೀಮಠದಲ್ಲಿ ಸಾಕಾರಗೊಳಿಸುತ್ತಿರುವ ಪೂಜ್ಯ ಶ್ರೀ ಶ್ರೀಗಳವರು ೧೨ನೇ ಶತಮಾನದ ಕಲ್ಯಾಣದಲ್ಲಿ ನಡೆದ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿ, ದಾಸೋಹ ವೈಭವವನ್ನು ಮತ್ತೆ ನೋಡುವ ಭಾಗ್ಯವನ್ನು ಕರುಣಿಸಿದ್ದಾರೆ. ಸರ್ವಧರ್ಮ ಸಮನ್ವಯಕ್ಕೆ ಜೀವಂತ ಸಾಕ್ಷಿಯಾಗಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ವಿವಿಧ ಜಾತಿ-ವರ್ಗಗಳಿಗೆ ಸೇರಿದ ಎಂಟು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಆಶ್ರಯನೀಡಿ ಅವರ ಭವಿಷ್ಯ ಉಜ್ವಲವಾಗುವಂತೆ ಮಾಡುತ್ತಿದ್ದಾರೆ. ಶ್ರೀಮಠದಲ್ಲಿ ವ್ಯಾಸಂಗ ಮಾಡಿದ ಲಕ್ಷಾಂತರ ಜನ ವಿದ್ಯಾರ್ಥಿಗಳು ಪರಮಪೂಜ್ಯ ಶ್ರೀ ಶ್ರೀಗಳವರ ಕೃಪಾಶೀರ್ವಾದದಿಂದ, ಅವರು ಕರುಣಿಸಿದ ಅರಿವಿನ ಜ್ಯೋತಿಯ ಮುಂಬೆಳಕಿನಲ್ಲಿ ಮುನ್ನಡೆಯುತ್ತಿದ್ದಾರೆ. ಇಂದು ಲಕ್ಷಾಂತರ ಮನೆ-ಮನಗಳಲ್ಲಿ ಸಿದ್ಧಗಂಗಾ ಜ್ಯೋತಿ ಪ್ರಜ್ವಲವಾಗಿ ಬೆಳಗುತ್ತಿದೆ. ಪರಮಪೂಜ್ಯ ಶ್ರೀ ಶ್ರೀಗಳವರು ನಾಡಿನ ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸುತ್ತಿರುವ ಸೇವೆ ಅನುಪಮವಾದುದು. ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗಳನ್ನು ತೆರೆಯುವುದರ ಮೂಲಕ ಶಿಕ್ಷಣದಿಂದ ವಂಚಿತರಾಗಿದ್ದ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಮಾಡಲು ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಇದರಿಂದ ಸಾವಿರಾರು ಜನ ಹೆಣ್ಣುಮಕ್ಕಳು ವಿದ್ಯಾವಂತರಾಗಿ ಉತ್ತಮ ಸಮಾಜ ನಿರ್ಮಾಣ ಕಾರ್ಯದಲ್ಲಿ ಕೈಜೋಡಿಸಿದ್ದಾರೆ. ಪರಮಪೂಜ್ಯ ಶ್ರೀ ಶ್ರೀಗಳವರ ದೂರದೃಷ್ಟಿಯ ಫಲ ಇಂದು ಫಲಕೊಡುತ್ತಿದೆ.

ನಾವು ಮಹಾಪುರುಷ ಬಸವಣ್ಣನವರನ್ನು ನೋಡಲು ಸಾಧ್ಯವಾಗದಿದ್ದರೂ, ಅವರು ಬಿಟ್ಟುಹೋದ ವಚನಗಳ ಮೂಲಕ ಅವರ ಜೀವನಾದರ್ಶನಗಳನ್ನು ಪರಿಚಯ ಮಾಡಿಕೊಳ್ಳುತ್ತಿದ್ದೇವೆ. ಇವತ್ತು ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿ ಬಸವಣ್ಣನವರನ್ನು ಕಾಣುತ್ತಿದ್ದೇವೆ. ಅಂತಹ ಪುಣ್ಯ ನಮ್ಮದಾಗಿರುವುದು ಸುದೈವವೆಂದೇ ಭಾವಿಸಿದ್ದೇನೆ.

ಪರಮಪೂಜ್ಯ ಶ್ರೀ ಶ್ರೀಗಳವರು ಆಡುವ ಒಂದೊಂದು ನುಡಿಗಳೂ ಅಮೂಲ್ಯವಾದವುಗಳು. ಅವರ ಅನುಭಾವದ ನುಡಿಗಳು ನಮ್ಮ ಜೀವನವನ್ನು ಮುನ್ನಡೆಸುವ ದಾರಿದೀಪಗಳು. ಕಷ್ಟದಲ್ಲಿ ಸಿಲುಕಿದವರಿಗೆ ಸಾಂತ್ವನವನ್ನು ನೀಡುವ ಮಮತೆಯ ನುಡಿಗಳಾಗಿ, ದಾರಿತಪ್ಪಿದವರಿಗೆ, ಕರ್ತವ್ಯದಿಂದ ವಿಮುಖರಾದವರಿಗೆ ಎಚ್ಚರಿಕೆ ನೀಡುವ, ಉತ್ತಮ ಮಾರ್ಗದಲ್ಲಿ ನಡೆಯುವಂತೆ ಮಾಡುವ ಮಹಾನ್ ಶಕ್ತಿಯಾಗಿವೆ. ನೊಂದ ಹೃದಯಕ್ಕೆ ತಂಪನ್ನು ನೀಡುವ ತಂಗಾಳಿಯಾಗಿದೆ. ಜೀವನೋತ್ಸಾಹ ನೀಡುವ ಚೈತನ್ಯದ ಚಿಲುಮೆಯಾಗಿದೆ.

– ಎಚ್.ಎಸ್. ಸಿದ್ಧಗಂಗಪ್ಪ



# ಸರ್ವಧರ್ಮ ಸಮನ್ವಯ ಸಾಧನಕ್ಷೇತ್ರ

– ಡಾ. ಸಾ.ಶಿ. ಮರುಳಯ್ಯ
ಮಾಜಿ ಅಧ್ಯಕ್ಷರು,
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು.



'ಭಾರತ ಬೆಳಗುತ್ತಿದೆ' ಎಂದರು ನಮ್ಮ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ. ನಾನು ಹೇಳುತ್ತೇನೆ ನಮ್ಮ ತುಮಕೂರು ಬೆಳೆಯುತ್ತದೆ ಎಂದು. ಬೆಳೆಯುತ್ತಿರುವುದರ ಅರ್ಥ ಬಡಾವಣೆಗಳನ್ನು ಬೆಳೆಸಿ, ದಶದಿಕ್ಕುಗಳಲ್ಲೂ ತನ್ನ ತೋಳು ಬಾಚಿ ಹಬ್ಬುತ್ತಿದೆಯೆಂದಲ್ಲ, ಅದು ಸಾಧಿಸುತ್ತಿರುವ ಲೌಕಿಕ ಮತ್ತು ಪಾರಮಾರ್ಥಿಕ ಪ್ರಗತಿ. ಲೌಕಿಕವಾಗಿ ನೋಡಿದರೆ ನಾವು ಕಾಣುವಂತೆ ತುಮಕೂರಿನಲ್ಲಿದ್ದುದು ಒಂದೇ ಕಾರ್ಖಾನೆ, ಅದು ಬಳಪದ ಕಾರ್ಖಾನೆ. ಈಗ? ಕೈಗಾರಿಕಾ, ಶಿಕ್ಷಣ ಕೇಂದ್ರಗಳನ್ನೇ ತನ್ನ ಮಡಿಲಲ್ಲಿಟ್ಟುಕೊಂಡಿದೆ. ಸಾಹಿತ್ಯಿಕವಾಗಿ ಗುಬ್ಬಿಯ ಮಲ್ಲಣಾರ್ಯ ಮೊದಲಾದವರನ್ನು ಕೊಟ್ಟ ಈ ಜಿಲ್ಲೆ ಐದನೆಯ ಶ್ರೇಷ್ಠ ಶೂನ್ಯಸಂಪಾದನಾಕಾರನಾದ ಗೂಳೂರು ಸಿದ್ಧವೀರಣ್ಣೊಡೆಯನನ್ನು ಕೊಟ್ಟಿದೆ. ಸೋಮೇಕಟ್ಟೆಮಠದ ಕವಿ ಪುಂಗವನನ್ನು ಕೊಟ್ಟಿದೆ. ಬೆಳ್ಳಾರದಲ್ಲಿ ಚಿನ್ನ ಬೆಳೆದಿದೆ. ಚಿಕ್ಕನಾಯ್ಕನಹಳ್ಳಿಯಲ್ಲಿ ಮ್ಯಾಂಗನೀಸ್ ಬೆಳೆದಿದೆ. ರಂಗಭೂಮಿಯ ಇತಿಹಾಸದಲ್ಲಿ ಅತ್ಯಂತ ವಿನೂತನವಾದ ದಾಖಲಿಸಿದ ಗುಬ್ಬಿ ವೀರಣ್ಣನವರನ್ನು ಪಡೆದಿದೆ. ಸಿದ್ಧರ ಬೆಟ್ಟದಲ್ಲಿ ಸಂಜೀವಿನಿ ಬೆಳೆದಿದೆ. ಕಲ್ಪತರುವಿನ ತವರೂರಾದ ಈ ಜಿಲ್ಲೆ ಸಜ್ಜನಿಕೆ, ಸಾತ್ವಿಕೆ, ಹೃದಯವಂತಿಕೆ ಮೊದಲಾದವುಗಳನ್ನು ತನ್ನ ಎದೆಯ ಬದುವಿನಲ್ಲಿ ಹಸುರಾಗಿಸಿದೆ. ಇವೆಲ್ಲವಕ್ಕೂ ಮಿಗಿಲಾಗಿ ಪರಮಪಾವನೆಯೂ, ಪ್ರಾಂಜಲ ಪುನೀತ ಮಾನಸಳೂ ಆದ ಗಗನಗಂಗೆ ನವತರಂಗೆ ಸಿದ್ಧಗಂಗೆಯ ಶುದ್ಧಗಂಗೆಯನ್ನು ಸದಾ ಹರಿಸಿ ಜನಮನವನ್ನು ಪಾವನಗೊಳಿಸುವ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂಬ ಪುಣ್ಯಾಭಿಧಾನದ ತೀರ್ಥ ತರಂಗಿಣಿಯನ್ನು ಪಡೆದು ಪುನೀತ ಪುಣ್ಯ ಕ್ಷೇತ್ರವಾಗಿದೆ.

ಇಂದು ಸಿದ್ಧಗಂಗೆಯ **"ಶ್ರೀ ಶಿವಕುಮಾರ ಸ್ವಾಮಿ"** ಎಂಬುದು ಒಂದು ವ್ಯಕ್ತಿಯ ಹೆಸರಾಗಿಲ್ಲ, ಪವಾಡ ಸದೃಶ ಜಗದಾಶ್ಚರ್ಯಗಳಲ್ಲಿ ಒಂದಾಗಿದೆ. ಪೂಜ್ಯರ ಪಾದಸ್ಪರ್ಶಮಾತ್ರದಿಂದಲೇ ಗುಡ್ಡಗುಹೆಯ ಕಾಡಿನ ಬೀಡಾಗಿದ್ದ ನೆಲ ಇಂದು ಒಂದು ಆಮುಷ್ಮಿಕ ಅವಿಮುಕ್ತ ಕ್ಷೇತ್ರವಾಗಿದೆ, ಆಗಂತುಕರಿಗೆ ಆನಂದದ ಆಡೊಂಬಲವಾಗಿದೆ. ಸಹಸ್ರೋಪ ಸಹಸ್ರ ಅನಾಥ ಪಕ್ಷಿಗಳಿಗೆ ಆಶ್ರಯತಾಣ ವಾಗಿದೆ, ಪ್ರಾಚೀನ ಋಷಿಮುನಿಗಳ ಆಶ್ರಯವನ್ನು ನೆನಪಿಗೆ ತರುವ ಋಷ್ಯಾಶ್ರಮವಾಗಿದೆ; ಧರ್ಮ ನಿರಪೇಕ್ಷ ಅಲ್ಲ – ಸರ್ವಧರ್ಮ ಸಮನ್ವಯ ಸಾಧನರಂಗವಾಗಿದೆ. ನಿತ್ಯ ದಾಸೋಹದಿಂದ ನಮ್ಮ ಸಂಸ್ಕೃತಿಯ ದಿಟ್ಟ ಧ್ವಜವನ್ನು ಎತ್ತಿಹಿಡಿದಿದೆ. ಎಲ್ಲಕ್ಕೂ ಮಿಗಿಲಾಗಿ ಸಿದ್ಧಗಂಗಾ ಕ್ಷೇತ್ರ ಶಿಕ್ಷಣ ಶಿಖರಿ ತಾನಾಗಿದೆ. ಇಷ್ಟೆಲ್ಲಾ ಔನ್ನತ್ಯದ ಮಜಲು ಮುಟ್ಟಿಸಿದ ಮಹಾನ್ ಚೇತನ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂದರೆ ಒಬ್ಬ ವ್ಯಕ್ತಿಯಿಂದ ಕೇವಲ ಅರ್ಧಮುಕ್ಕಾಲು ಶತಮಾನದ ಆದಿಯಲ್ಲಿ ಇದು ಸಾಧ್ಯವೇ? ಎಂದು ಪ್ರಶ್ನಿಸಿಕೊಂಡು ಉತ್ತರಕ್ಕಾಗಿ ಹುಬ್ಬೇರಿಸುವ ಬೆರಗಿನ ಬೆಟ್ಟವಾಗಿದೆ! ಪರಮಪೂಜ್ಯರ ತಪಸ್ಸು, ಸಾಧನೆ, ಕರ್ತೃತ್ವಶಕ್ತಿ, ಮಾನವ ಕುಲದ ಸರ್ವತೋಮುಖ ಪ್ರಗತಿಯ ಹಂಬಲ ಇವು ಅಮೋಘ, ಅನಾದೃಶ್ಯ. ಭಾರತದ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ವಿನೂತನ ದಾಖಲೆ ನಿರ್ಮಿಸಿದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ದೇವಮಾನವರೂ ಅಹುದು, ರಾಷ್ಟ್ರಕವಿ ಕುವೆಂಪುರವರು ಕನಸಿನಲ್ಲಿ ಕಂಡ ನಿಜದ ಅರ್ಥದಲ್ಲಿ ಏಕೈಕ ವಿಶ್ವಮಾನವರೂ ಅಹುದು.

ಇತ್ತೀಚೆಗೆ, ಇವುಗಳಷ್ಟೇ ಪ್ರಮಾಣದಲ್ಲಿ ಮತ್ತೊಂದು ಮಹೋನ್ನತ ಪ್ರಗತಿ ತುಮಕೂರಿನಲ್ಲಿ ಸಾಧಿತವಾಗಿದೆ. ಅದು ಗುರು-ವಿರಕ್ತ ಸಮಾಗಮ, ಸಂಗಮ! ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಅಂತರಂಗದಲ್ಲಿ ಬಹುದಿನಗಳಿಂದಲೂ ಕೊರೆಯುತ್ತಿದ್ದ ಒಂದು ನೋವಿತ್ತು. ಅದು ವೀರಶೈವರು ಒಂದಾಗಲಿಲ್ಲ, ಚೆಂದಾಗಲಿಲ್ಲ ಎಂಬುದು. ಅದನ್ನು ಆಗಾಗ ಅಭಿವ್ಯಕ್ತಿಸುತ್ತಲೂ ಇದ್ದರು. ವೀರಶೈವ ನಮ್ಮ ತಾಯಿ. ನಮ್ಮ ತಾಯಿಯನ್ನು ಪ್ರೀತಿಸುವುದರ ಅರ್ಥ ಬೇರೆಯವರ ತಾಯಿಯನ್ನು ದ್ವೇಷಿಸುತ್ತೇವೆ ಎಂದಲ್ಲ. ನಿಮ್ಮ ನಿಮ್ಮ ತಾಯಿ ನಿಮಗೆ ಹೆಚ್ಚು ಮೆಚ್ಚು; ಪೂಜ್ಯಳೂ ಅಹುದು. ಅವಳನ್ನು ಪೂಜಿಸಿ ಗೌರವಿಸುವುದರಲ್ಲಿ ತಪ್ಪೇನೂ ಇಲ್ಲ. ಅದು ಭವ್ಯ ಭಾವನೆ ಎಂಬುದಾಗಿ ನಾವು ಭಾವಿಸಬೇಕು. ಇಂತೆಲ್ಲ ಉಪದೇಶಿಸುತ್ತಿದ್ದ ಪೂಜ್ಯರು ಮೊದಲು ಮನೆಗೆದ್ದು ಆ ನಂತರ ಮಾರುಗೆಲ್ಲು ಎಂದು ಎಚ್ಚರಿಸುತ್ತಿದ್ದರು. ಸುಮಾರು ಎರಡು ದಶಕಗಳ ಹಿಂದೆ ರಾಜಾಪುರ ಸಂಸ್ಥಾನ ಮಠದಲ್ಲಿ ಸಮಾವೇಶಗೊಂಡಿದ್ದ ಸುಮಾರು ೧೨೦ ಹರಗುರು ಚರಮೂರ್ತಿಗಳ ಸಮಕ್ಷಮ ಪ್ರಸ್ತಾಪಿಸಿ, ಪಿಸುಮಾತು ನುಡಿದಿದ್ದರು. ವೀರಶೈವರನ್ನು ಒಂದುಗೂಡಿಸುವುದು ಬೆಟ್ಟಕ್ಕೆ ಕಲ್ಲು ಹೊತ್ತಂತೆ. ಸಮುದ್ರಕ್ಕೆ ನೀರು ಹಾಯಿಸಿದಂತೆ, ನ್ಯೂಕ್ಯಾಸಲ್‌ಗೆ ಕಲ್ಲಿದ್ದಲು ಸಾಗಿಸಿದಂತೆ ವ್ಯರ್ಥಶ್ರಮದಲ್ಲಿ ಅರ್ಥವಿಲ್ಲ ಎಂದು ಮೌನವನ್ನಾಚರಿಸಿದ್ದರು. ಆದರೆ ವೀರಶೈವ ಮಹಾಸಭಾ ಜಾಗೃತಿ ಜಯಘಂಟೆ ಬಾರಿಸಿದ ಮೇಲೆ ವೀರಶೈವರು ಎಚ್ಚತ್ತರು. ಕೆಟ್ಟ ಮೇಲೆ ಬುದ್ಧಿಬಂತು ಎಂಬಂತೆ ಇವರಲ್ಲಿ ಹೊಸಬೆಳಕು ಮೂಡಿತು. ವೀರಶೈವ ಇಂದಾದರೂ ಜಾಗೃತವಾಗಬೇಕು; ಆಗದಿದ್ದರೆ ಅದರ ಪತನ ಬಹುದೂರವಿಲ್ಲ. ಆದರೆ ಮಕ್ಕಳು ಶಿಕ್ಷಣದಲ್ಲೂ ವಂಚಿತರಾದರು, ಅಧಿಕಾರ, ಅಂತಸ್ತು, ಅಷ್ಟೇಕೆ ಕರ್ನಾಟಕದ ಜನಸಂಖ್ಯೆಯಲ್ಲಿ ಮೂರನೆ ಒಂದು ಭಾಗವಿರುವ ವೀರಶೈವರಿಗೆ ಮಂತ್ರಿಮಂಡಲದಲ್ಲೂ ಸಮಾನ ಸ್ಥಾನಮಾನವಿಲ್ಲ, ವೀರಶೈವರ ಕೂಗು ಬರಿಯ ನರಿಕೂಗು ಆಗಿಪರಿಣಮಿಸಿದೆ; ಇಂದಲ್ಲ ಮುಂದೆ ಬರುವ ನಮ್ಮ ಮಕ್ಕಳು ಮೊಮ್ಮಕ್ಕಳು ಶಾಪ ಹಾಕಿಯಾರು ಎಂಬ ಭೀತಿಯಿಂದ ವೀರಶೈವ ಒಂದಾಗಲು ಯತ್ನಿಸಿತು. ಅದರ ಕರ್ಣಧಾರತ್ವ ವಹಿಸಿದವರು ಪರಮಪೂಜ್ಯ ಸಮನ್ವಯ ಸಾಧಕ ಶ್ರೀ ಶ್ರೀ ಸಿದ್ಧಗಂಗಾ ಶಿವಕುಮಾರ ಮಹಾಸ್ವಾಮಿಗಳವರು. ಸಂಘಟನೆಯಲ್ಲಿ ಶಕ್ತಿ ಇದೆ. ಮೊದಲು ನಾವು ನಾವು ಒಂದಾಗಬೇಕು. ಅಭಿಪ್ರಾಯ ಭೇದದ ಅರ್ಥ; ದ್ವೇಷ ಸಾಧನೆ ಎಂದಲ್ಲ. ಜಾರ್ಜ್ ವಾಷಿಂಗ್‌ಟನ್ ಉತ್ತರ ಅಮೇರಿಕೆಯನ್ನು ಬ್ರಿಟಿಷರ ಕಪಿಮುಷ್ಠಿಯಿಂದ ಬಿಡಿಸಿ ದೇಶ ಸ್ವಾತಂತ್ರ್ಯ ತಂದದ್ದರಿಂದ ದೊಡ್ಡವನಾಗಲಿಲ್ಲ. ಉತ್ತರ ಅಮೇರಿಕೆಯಲ್ಲಿದ್ದ ಉತ್ತರ ದಕ್ಷಿಣ ಎಂಬ ಭೇದ ಭಾವ ತೊಡೆದು ಅದೊಂದು ಅವಿಭಕ್ತ ಏಕೈಕ ರಾಷ್ಟ್ರವನ್ನಾಗಿಸಿದ್ದರಿಂದ ಇಂದು ವೀರಶೈವವನ್ನು ಒಂದಾಗಿಸುವ ಮಹಾ ಸಂಕಲ್ಪವನ್ನು ಸ್ವೀಕರಿಸಿ, ಕಾರ್ಯೋನ್ಮುಖರಾಗಿ ಜನ ಮನದ ಕೊಳೆ ತೊಳೆಯುತ್ತಿರುವ ಪುಣ್ಯಪ್ರಾಂಜಲ ತೀರ್ಥ ಸ್ವರೂಪರಾದ ಪೂಜ್ಯ ಶ್ರೀ ಶ್ರೀಗಳವರ ಮಹತ್ ಸಾಧನ ವೀರಶೈವೇತಿಹಾಸಲ್ಲಿ ಒಂದು ಸುವರ್ಣ ಸಂಪುಟದ ಹೆಗ್ಗಳಿಕೆಗೆ ಪಾತ್ರವಾಗಿದೆ. ಇದರ ರಚನೆ ಈಗಾಗಲೇ ರೂಪುಗೊಳ್ಳುತ್ತಿದೆ. ಹಂಪೆಯಲ್ಲಿ ನಡೆದ ವೀರಶೈವ ಬೃಹತ್ ಸಮಾವೇಶದಲ್ಲಿ ಜಾಗೃತಿಯ ಮಂತ್ರ ಘೋಷಿಸಿದ್ದಾರೆ. ಇದು ಸಮಸ್ತ ವೀರಶೈವರಿಗೆ ಹರ್ಷ ತಂದ ಸುದ್ಧಿ. ಈ ಸುದ್ಧಿ ಹರ್ಷದಾಯಕ ಹೊನಲಾಗುತ್ತದೆ. ಗುರು-ವಿರಕ್ತ ಭಾವೈಕ್ಯತೆ ಹಾಗೂ ಸಮಾಗಮವೇರ್ಪಡಿಸಿದ ಕೀರ್ತಿಗೆ ತುಮಕೂರು ಸಿದ್ಧಗಂಗಾ ಕ್ಷೇತ್ರ ಪಾತ್ರವಾಗುತ್ತದೆ ಎಂಬ ಪೂರ್ಣಭರವಸೆ ವೀರಶೈವರಲ್ಲಿ ಈಗಾಗಲೇ ಮೂಡಿದೆ.

ನಮ್ಮೆಲ್ಲರ ಹಂಬಲವನ್ನು ಹಣ್ಣಾಗಿಸಲು ಸಂಕಲ್ಪಬದ್ಧವಾಗಿರುವ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆನಂದದ ದಿನಗಳನ್ನು ಕಾಣುವ, ಪೂಜ್ಯರ ಶತಮಾನೋತ್ಸವ ಆಚರಣೆಯ ಭಾಗ್ಯ ನಮ್ಮೆಲ್ಲರಿಗೂ ಲಭಿಸಲಿ ಎಂದು ಆಶಿಸುತ್ತದೆ ಭಕ್ತವೃಂದ.

★

**ಶ್ರೀವಾಣಿ**

*ಭರತಖಂಡಕ್ಕೆ ಸುದೀರ್ಘ ಇತಿಹಾಸವಿದೆ. ಶ್ರೀಮಂತ ಸಂಸ್ಕೃತಿಯಿದೆ. ವಿಶ್ವಮಾನ್ಯ ಜೀವನಕ್ರಮವನ್ನು ಈ ರಾಷ್ಟ್ರ ತೋರಿಸಿಕೊಟ್ಟಿದೆ. ಶಾಂತಿಪ್ರಿಯದೇಶವೆನಿಸಿದೆ. ಆದರೆ ಆತ್ಮರಕ್ಷಣೆಯ ಸಂದರ್ಭ ಬಂದಾಗ ಶತ್ರು ದಮನಕ್ಕಾಗಿ ಎದ್ದು ನಿಲ್ಲಬೇಕಾಗುತ್ತದೆ.*

**ಶ್ರೀವಾಣಿ**

*ಇಂದಿನ ಜಗತ್ತಿನ ಜನಾಂಗದಲ್ಲಿ ತತ್ವನಿಷ್ಠೆ, ಧಾರ್ಮಿಕ ಸಂಸ್ಕೃತಿ ಉಳಿಯಬೇಕಾದರೆ ಮಠಗಳು ಜ್ಞಾನದಾಸೋಹ, ವಿದ್ಯಾದಾಸೋಹ, ಪ್ರಸಾದ ದಾಸೋಹ ನಿಲಯಗಳಾಗಬೇಕು.*



# ನಡೆದಾಡುವ ದೇವರು

– ಪ್ರೊ. ಬಿ. ವಿರೂಪಾಕ್ಷಪ್ಪ
ಸಂಪಾದಕರು, 'ಬಸವಪಥ',
ಬಸವ ಭವನ, ಬೆಂಗಳೂರು.



ವೀರಶೈವರಿಗೆ ಅಥವಾ ಲಿಂಗಾಯತರಿಗೆ ಬಯಲೇ ದೇವರು. ಅದೇ ಪರವಸ್ತು, ಪರಶಿವ. ಅದರಿಂದಲೇ ಸಕಲ ಚರಾಚರಗಳು ಹೊರಹೊಮ್ಮಿ ಈ ಸೃಷ್ಟಿ ರಚನೆಯಾಗುತ್ತದೆ. ಬಯಲೇ ದೇವರಾದರೂ ಅದನ್ನು ಪೂಜಿಸುವುದು ಹೇಗೆ? ಅದು ಗುರುಲಿಂಗ ಜಂಗಮ ರೂಪದಲ್ಲಿ ತಲೆದೋರಿ ಪೂಜೆಗೊಳ್ಳುತ್ತದೆ. ಬಸವಣ್ಣನವರು ಇದನ್ನು ಹೀಗೆ ಹೇಳಿದ್ದಾರೆ.

*ನಿತ್ಯನಿರಂಜನ ಪರಂಜ್ಯೋತಿವಸ್ತು*
*ಉಪದೇಶವ ಕೊಟ್ಟು ಗುರುವಾದ*
*ಕರಸ್ಥಲಕ್ಕೆ ಬಂದು ಲಿಂಗವಾದ*
*ಪಸರವಾದ ಪ್ರಪಂಚವನಳಿದು*
*ದಾಸೋಹವ ಮಾಡಿಸಿಕೊಂಡು ಜಂಗಮನಾದ*
*ಇಂತೀ ಗುರುಲಿಂಗ ಜಂಗಮ ಒಂದೇಯಲ್ಲದೆ ಭಿನ್ನವಿಲ್ಲ*
*ಈ ಮೂರಕ್ಕೆ ಮೂರನಿತ್ತು ಮೂರನೊಂದು ಮಾಡಬಲ್ಲಡೆ*
*ಅದು ಪ್ರಸಾದ ಕಾಯವಯ್ಯಾ*

ಪರಶಿವ ಲಿಂಗದೀಕ್ಷೆ ಕೊಟ್ಟು ಗುರುವಾಗುತ್ತಾನೆ. ಕರಸ್ಥಲದಲ್ಲಿ ಇಷ್ಟಲಿಂಗ ರೂಪದಲ್ಲಿ ಪೂಜೆಗೊಳ್ಳುತ್ತಾನೆ. ಚರಜಂಗಮನಾಗಿ, ಪರಜಂಗಮನಾಗಿ, ಆಧ್ಯಾತ್ಮ ಸಾಧನೆಯಲ್ಲಿದ್ದವರಿಗೆ ಮಾರ್ಗದರ್ಶನ ಮಾಡಿ, ಸರ್ವ ವ್ಯಾಮೋಹಗಳನ್ನಳಿದು ಭಕ್ತರಿಂದ ದಾಸೋಹವನ್ನು ಸ್ವೀಕರಿಸಿ, ತಾನೂ ಜ್ಞಾನ ದಾಸೋಹ ಹಾಗೂ ಅನ್ನ ದಾಸೋಹವಗೈದು ಲೋಕವನ್ನು ಉದ್ಧರಿಸುತ್ತಾನೆ.

## ಜ್ಞಾನದಾಸೋಹ

ಪರಮಪೂಜ್ಯ ಶ್ರೀ ಸಿದ್ಧಗಂಗಾ ಶ್ರೀಗಳು ಹೀಗೆ ಜನರಿಗೆ ಲಿಂಗದೀಕ್ಷೆ ಕೊಡುತ್ತಾ, ಗುರುಸ್ಥಾನದಲ್ಲಿದ್ದಾರೆ. ಅಷ್ಟಾವರಣ, ಪಂಚಚಾರಾಂತರ್ಗತ ಷಟ್‌ಸ್ಥಲಮಾರ್ಗದಲ್ಲಿ ನಡೆದು ಆಧ್ಯಾತ್ಮ ಸಿದ್ಧಿಯ ತುತ್ತ ತುದಿಗೇರಿ ತಾವೇ ಲಿಂಗವಾಗಿ ಪೂಜೆಗೊಳ್ಳುತ್ತಿದ್ದಾರೆ.

**ಶ್ರೀವಾಣಿ**

*ನಮ್ಮ ಹಿಂದಿನ ಪೂಜ್ಯ ಗುರುಗಳು ನಮಗೆ ಕಲಿಸಿದ ಪಾಠವೆಂದರೆ ಸದಾ ಕ್ರಿಯಾಶೀಲವಾಗಿರುವ ಜೀವನ ಭಾಗ್ಯ.*





ಪ್ರಸಾದ ನಿಲಯದಲ್ಲಿ ಪೂಜ್ಯ ಶ್ರೀ ಶ್ರೀಗಳವರು

ಚರಜಂಗಮರಾಗಿ ಹಳ್ಳಿಗೆ ಏಕ ರಾತ್ರಿ, ಪಟ್ಟಣಕ್ಕೆ ಪಂಚರಾತ್ರಿ, ಎಂಬಂತೆ ಸಮಚಾರ ಮಾಡಿ ಜನರನ್ನು ಉದ್ಧರಿಸುತ್ತಾ ಅವರಿಂದ ದಾಸೋಹವನ್ನು ಸ್ವೀಕರಿಸಿ ಜಂಗಮರೆನಿಸಿದ್ದಾರೆ. ತಮ್ಮ ಮಠದಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ (ಪ್ರಸ್ತುತ ಅದರ ಸಂಖ್ಯೆ ಎಂಟು ಸಾವಿರ ದಾಟದೆ) ಆಧ್ಯಾತ್ಮ ಹಾಗೂ ಜೀವನೋಪಾಯಕ್ಕೆ ಬೇಕಾದ ಶಿಕ್ಷಣವನ್ನು ಕೊಡುತ್ತಾ ಜ್ಞಾನ ಜಂಗಮರೆನಿಸಿದ್ದಾರೆ. ಪ್ರತಿ ದಿನವು ಎಂಟು ಸಾವಿರಕ್ಕಿಂತಲೂ ಅಧಿಕ ವಿದ್ಯಾರ್ಥಿಗಳ ಪ್ರಾರ್ಥನೆ ಸಭೆಯನ್ನು ವೀಕ್ಷಿಸಿದಾಗ ನಮ್ಮ ಪ್ರಾಚೀನ ಗುರುಕುಲದ ನೆನಪು ಬರುತ್ತದೆ. ಅನೇಕ ಶಾಲಾ ಕಾಲೇಜುಗಳನ್ನು ಸ್ಥಾಪಿಸಿ ಪ್ರತಿನಿತ್ಯ ನಿರಂತರವಾಗಿ ಜ್ಞಾನ ದಾಸೋಹ ನಡೆಯುವಂತೆ ಮಾಡಿದ್ದಾರೆ. ಉಚಿತ ವಸತಿನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಅನ್ನ ದಾಸೋಹ ನಡೆಯುತ್ತದೆ. ಹೀಗೆ ಶ್ರೀಗಳು – ಬಸವಣ್ಣನವರು ಹೇಳಿರುವಂತೆ ಗುರುಲಿಂಗ ಜಂಗಮ ತತ್ವಗಳನ್ನು ಒಂದುಗೂಡಿಸಿಕೊಂಡು ಅವುಗಳಲ್ಲಿ ಸಮನ್ವಯವನ್ನು ಸಾಧಿಸಿಕೊಂಡು ಮಹಾಪುರುಷರಾಗಿದ್ದಾರೆ. ನಡೆದಾಡುವ ದೇವರಾಗಿದ್ದಾರೆ. ಅವರು ದೇಹದಾರಿಗಳಾಗಿ ಈ ಭೂಮಿಯ ಮೇಲೆ ನಡೆದಾಡುತ್ತಿರುವಾಗ ಅವರ ದರ್ಶನ ಪಡೆಯುವ ನಾವೇ ಭಾಗ್ಯಶಾಲಿಗಳೆಂದು ಹೇಳಬೇಕು. ದೇವರು ನಿರಾಕಾರ; ಆತನನ್ನು ನೋಡಲಾಗುವುದಿಲ್ಲವೆನ್ನುತ್ತಾರೆ. ಶ್ರೀಗಳ ದರ್ಶನ ಮಾಡಿದರೆ ದೇವರ ದರ್ಶನವಾದಂತೆಯೇ ಎಂದು ಬೇರೆ ಹೇಳಬೇಕಾಗಿಲ್ಲ.

**ಮೊಟ್ಟಮೊದಲು** ನನಗೆ ಶ್ರೀ ಸಿದ್ಧಗಂಗಾ ಶ್ರೀಗಳಾದ ಪರಮಪೂಜ್ಯ ಶ್ರೀ ಮ.ನಿ.ಪ್ರ.ಸ್ವ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ದರ್ಶನವಾದದ್ದು, ೧೯೬೪ರಲ್ಲಿ. ಆಗ ನಾನು ಚಿತ್ರದುರ್ಗದ ಸರಕಾರಿ ಪ್ರಥಮ ದರ್ಜೆಯ ಕಾಲೇಜಿನ ಪ್ರಿನ್ಸಿಪಾಲನಾಗಿದ್ದೆ. ಆಗ ಶ್ರೀಗಳು ಯಾವುದೋ ಸಮಾರಂಭಕ್ಕಾಗಿ ಚಿತ್ರದುರ್ಗಕ್ಕೆ ದಯಮಾಡಿಸಿದ್ದರು. ಅಕಸ್ಮಾತ್ ಕಾರಿನಿಂದಿಳಿದ ಸ್ಥಳೀಯ ಮಹನೀಯರೊಬ್ಬರು ನಮ್ಮ ಕಾಲೇಜನ್ನು ತೋರಿಸಲು ಅವರನ್ನು ಕರೆತಂದರು. ಶ್ರೀಗಳು ನಾನಿದ್ದ ಕೊಠಡಿಗೆ ಪಾದಾರ್ಪಣೆ ಮಾಡಿದ ಕೂಡಲೇ ಅವರ ದರ್ಶನದಿಂದ ನಾನು ಅವಾಕ್ಕಾದೆ. ಇದು ನನಗೆ ಅನಿರೀಕ್ಷಿತ ಘಟನೆಯಾಗಿತ್ತು. ಅವರು ಕಾಲೇಜಿನ ಬಗ್ಗೆ, ವಿದ್ಯಾರ್ಥಿಗಳ ಬಗ್ಗೆ; ಈಗಿನ ಶಿಕ್ಷಣ ಪದ್ಧತಿಯ ಬಗ್ಗೆ ನನ್ನೊಂದಿಗೆ ನಡೆಸಿದ ಸಂಭಾಷಣೆಯಿಂದ ನಾನು ಅವರಲ್ಲಿರುವ ಶಿಕ್ಷಣ ಪ್ರೇಮ, ವಿದ್ಯಾರ್ಥಿಗಳ ಬಗ್ಗೆ ಕಳಕಳಿ, ಸಾಮಾನ್ಯ ಜನರ ಬಗ್ಗೆ ಕಾಳಜಿ ಹಾಗೂ ಎಲ್ಲಕ್ಕೂ ಹೆಚ್ಚಾಗಿ ಅವರ ಸರಳತೆಯಿಂದ ಬಹಳಷ್ಟು ಪ್ರಭಾವಿತನಾದೆ. ಇವೆಲ್ಲವುಗಳ ಜೊತೆಗೆ ಆಧ್ಯಾತ್ಮ ತೇಜಸ್ಸಿನಿಂದ ಬೆಳಗುತ್ತಿರುವ ಅವರ ಮುಖಮುದ್ರೆ, ಅವರಲ್ಲಿ ಭಕ್ತಿ ಗೌರವಗಳನ್ನು ಮೂಡಿಸಿದವು. ನಂತರ ನಾನು ಹಾಸನ ಸರಕಾರೀ ಕಾಲೇಜಿನ ಪ್ರಿನ್ಸಿಪಾಲನಾಗಿ ಕೆಲಸ ಮಾಡುತ್ತಿದ್ದೆ. ಸುಮಾರು ಹತ್ತು ವರ್ಷದ ಅವಧಿಯಲ್ಲಿ ಅನೇಕ ಸಾರಿ ಅವರು ಹಾಸನಕ್ಕೆ ದಯಮಾಡಿಸಿದ್ದರು. ಅಲ್ಲಿಯೂ ಕೆಲವೊಮ್ಮೆ ಅವರನ್ನು ದರ್ಶನ ಮಾಡುವ ಪ್ರಸಂಗಗಳು ಒದಗಿಬಂದು, ಅವರಲ್ಲಿ ನನಗೆ ಗೌರವಾದರಗಳು ಹೆಚ್ಚುತ್ತಲೇ ಹೋದವು.

ಅದು ೧೯೭೭ರ ಅವಧಿ. ನಾನು ಕಾಲೇಜಿನ ಶಿಕ್ಷಣದ ನಿರ್ದೇಶಕನಾಗಬೇಕಾ

**ಶ್ರೀವಾಣಿ**

*ಮಾತು ಮಿತವಾಗಿರಬೇಕು. ಹಿತವಾಗಿರಬೇಕು. ಪ್ರೀತಿಯಿಂದಿರಬೇಕು. ಸರಳವಾಗಿರಬೇಕು. ಮಧುರವಾಗಿರಬೇಕು. ಮೃದುವಾಗಿರಬೇಕು. ಮಾತೇ ತಪಸ್ಸು ಎಂಬಂತಿರಬೇಕು.*



ವಜ್ರಮಹೋತ್ಸವದ ವಿದ್ಯಾರ್ಥಿನಿಲಯ

ಗಿತ್ತು. ಸರಕಾರದವರು ನನ್ನನ್ನು ಕಡೆಗಣಿಸಿ ಸೇವೆಯಲ್ಲಿ ಕಿರಿಯ ಬೇರೊಬ್ಬರನ್ನು ನೇಮಕ ಮಾಡಿದರು. ಈ ಹಾಸನದಲ್ಲಿ ನಾನೂ ಇವರ ದರ್ಶನವನ್ನು ಪಡೆಯಲು ಹೋದಾಗ, ನಿಮ್ಮ ಸರಕಾರಿ ಸೇವೆಯಲ್ಲಿ ನಿಮಗೆ ಅನ್ಯಾಯವಾಗಿದೆ. ನಿರಾಶರಾಗಬೇಡಿ. ನಿಮಗೆ ಒಳ್ಳೆಯದಾಗುವುದೆಂದು ಆಶೀರ್ವದಿಸಿದರು. ಅವರ ಆಶೀರ್ವಾದದ ಫಲವಾಗಿ ಒಂದು ವರ್ಷದೊಳಗಾಗಿ ಕೋರ್ಟಿನ ಕೇಸು ನನ್ನಂತಾಗಿ ನಾನು ವಯಸ್ಕರ ಶಿಕ್ಷಣ ನಿರ್ದೇಶಕನಾಗಿ ನೇಮಕಗೊಂಡೆ. ಇದನ್ನು ನಾನು ಎಂದೂ ಮರೆಯುವಂತಿಲ್ಲ.

### *ಮಹಾದಾಸೋಹ*

ಎಲ್ಲ ದಾನಗಳಿಗಿಂತಲೂ ಅನ್ನದಾನವೇ ಶ್ರೇಷ್ಠವೆಂದು ಸರ್ವಜ್ಞ ಕವಿ ಹೇಳಿದ್ದಾನೆ. ಅನ್ನದಾನ ಪದ್ಧತಿ ಪ್ರತಿಯೊಂದು ಧರ್ಮದಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಪ್ರಚಲಿತವಿದ್ದರೂ ದಾಸೋಹದ ಪರಿಕಲ್ಪನೆ ವಿಶ್ವ ಸಂಸ್ಕೃತಿಗೆ ನೀಡಿದ ವಿಶಿಷ್ಟ ಕಾಣಿಕೆ. ದಾಸೋಹ ದಾನವಲ್ಲ; ಗರ್ವದಿಂದ ಮಾಡುವ ದಾನವಂತೂ ಅಲ್ಲವೇ ಅಲ್ಲ. ದಾಸೋಂಭಾವನೆಯಿಂದ ಅಥವಾ ಸೇವಾ ಭಾವನೆಯಿಂದ ಜಂಗಮ ಸಮುದಾಯಕ್ಕೆ ಮಾಡುವ ಸಮರ್ಪಣೆ. ಜಂಗಮರೆಂದರೆ, ಒಂದು ವಿಶಿಷ್ಟವರ್ಗವಲ್ಲ. ಇದು ಕುಲಜಾತಿ. ನಾಮ ಸೀಮೆಗಳನ್ನು ಮೀರಿದ ತತ್ವ.

ಇದ ಕುರಿತು ಷಣ್ಮುಖಸ್ವಾಮಿಗಳು ಹೀಗೆ ಹೇಳುತ್ತಾರೆ :

*"ಜಂಗಮಕ್ಕೆ ಮಾತಾಪಿತರಿಲ್ಲ,*
*ಜಂಗಮಕ್ಕೆ ನಾಮರೂಪಗಳಿಲ್ಲ*
*ಜಂಗಮಕ್ಕೆ ಸೀಮೆಸಂಗಗಳಿಲ್ಲ,*
*ಜಂಗಮಕ್ಕೆ ಮಾಯಾಮಲಗಳಿಲ್ಲ ನೋಡಾ*
*ಅಖಂಡೇಶ್ವರಾ.*
*ಶ್ರೀಗಳು ಇಂಥ ಜಂಗಮರಾಗಿದ್ದಾರೆ.*

ಶ್ರೀಗಳು ಇಂಥ ಜಂಗಮರಾಗಿದ್ದಾರೆ. ಸಕಲ ಜೀವಾತ್ಮರೂ ಜಂಗಮ ಪದದ ವ್ಯಾಪ್ತಿಯಲ್ಲಿ ಬರುತ್ತಾರೆ. ಇಂಥ ಜಂಗಮ ತೃಪ್ತಿಯೇ ಲಿಂಗ ತೃಪ್ತಿ. ಅಥವಾ ಈಶತೃಪ್ತಿ ಎಂಬ ಅರ್ಥವನ್ನು ಇದು ಒಳಗೊಂಡಿದೆ. ಈ ಅರ್ಥದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಪ್ರತಿ ದಿನವೂ ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರಿಗೆ ದಾಸೋಹವನ್ನೇರ್ಪಡಿಸುತ್ತಿದ್ದರೆಂದು ವೀರಶೈವ ಪುರಾಣಗಳಲ್ಲಿ ಮತ್ತು ಶರಣರ ವಚನಗಳಲ್ಲಿ ಉಕ್ತವಾಗಿದೆ. ಇಂದು ಅದರ ಪ್ರತ್ಯಕ್ಷ ನಿದರ್ಶನವನ್ನು ಶ್ರೀ ಸಿದ್ಧಗಂಗಾ ಮಠದಲ್ಲಿ ನಾವು ಕಾಣುತ್ತಿದ್ದೇವೆ.

ದಾಸೋಹವೇ ವೀರಶೈವದ ಜೀವಾಳ. ಅಂತೆಯೇ ಇದು ಶ್ರೀ ಸಿದ್ಧಗಂಗಾಮಠದ ಜೀವಾಳ. ಶ್ರೀಗಳೂ ದಾಸೋಹ ತತ್ವದ ಸಾಕಾರಮೂರ್ತಿಗಳು. ನಾನು ೧೯೭೮ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯನಾಗಿದ್ದಾಗ, ಶ್ರೀಮಠಕ್ಕೆ ಹೋಗುವ ಪ್ರಸಂಗ ಒದಗಿಬಂತು. ಆಗ ಅಲ್ಲಿಯ ದಾಸೋಹ ವ್ಯವಸ್ಥೆಯನ್ನು ನೋಡಿ ಆಶ್ಚರ್ಯ ಚಕಿತನಾದೆ. ಈ ವ್ಯವಸ್ಥೆಯ ವಿಷಯವಾಗಿ ಈ ಮೊದಲು ಕೇಳಿ ತಿಳಿದಿದ್ದೆ. ಈಗ ಪ್ರತ್ಯಕ್ಷ ನೋಡಿದಾಗ ಹರ್ಷದಿಂದ ಮೈಯಲ್ಲಿ ಯಾವುದೋ ದಿವ್ಯಶಕ್ತಿಯ ಸಂಚಾರವಾದಂತಾಯಿತು. ಜಾತಿ, ಮತ, ಭೇದವನ್ನೆಣಿಸದೆ

ಶ್ರೀವಾಣಿ

"ಸೇವೆ" ಎಂಬುದು ಪ್ರಚಾರದ ಸರಕಲ್ಲ. ಅದು ಗುಪ್ತಶಕ್ತಿ. ವ್ಯಕ್ತಿಯನ್ನು ಆರೋಗ್ಯವಂತನ್ನಾಗಿಡುವ ಸಂಜೀವಿನಿ.



ಪ್ರತಿನಿತ್ಯವೂ ಸಾವಿರಾರು ವಿದ್ಯಾರ್ಥಿಗಳು ಭಕ್ತಾದಿಗಳು ಇಲ್ಲಿಯ ಅನ್ನ ದಾಸೋಹದಲ್ಲಿ ಪಾಲ್ಗೊಳ್ಳುತ್ತಿದ್ದರು. ನಾನು ಅಡಿಗೆ ಮನೆ ಪ್ರವೇಶಿಸಿದಾಗ, ಅಲ್ಲಿದ್ದ ಅಡಿಗೆಯ ಬೃಹತ್ ಪಾತ್ರೆಗಳೇ ಇದನ್ನು ನನಗೆ ಮನವರಿಕೆ ಮಾಡಿಕೊಟ್ಟಿತು.

ಈಗ ಈ ವ್ಯವಸ್ಥೆ ಇನ್ನು ಬೃಹತ್ತಾಗಿ ಬೆಳೆದಿದೆ. ಪ್ರತಿ ದಿನ ಇಲ್ಲಿ ೮,೦೦೦ಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಮತ್ತು ಇತರರು ಪ್ರಸಾದ ಸ್ವೀಕರಿಸುತ್ತಾರೆ. ಈ ರೀತಿಯ ದಾಸೋಹ ಮಧ್ಯಾಹ್ನ ಮತ್ತು ರಾತ್ರಿ ಎರಡು ಸಾರಿ ನಡೆದು ಒಟ್ಟು ಸಂಖ್ಯೆ ೨೦,೦೦೦ಕ್ಕೂ ಮೀರುತ್ತದೆ. (ಪ್ರತಿದಿನ ಮಧ್ಯಾಹ್ನ ವಿದ್ಯಾರ್ಥಿಗಳಿಗೆ ಉಪಹಾರ ನೀಡುತ್ತಿದೆ) ಈ ಕ್ಷೇತ್ರದಲ್ಲಿ ಜಾತ್ರೆಯ ಸಮಯದಲ್ಲಿ ನಡೆಯುವ ದಾಸೋಹದಲ್ಲಿ ಪಾಲ್ಗೊಳ್ಳುವವರ ಸಂಖ್ಯೆ ಲಕ್ಷಕ್ಕೂ ಮೀರುತ್ತದೆ. ಸಾಮಾನ್ಯ ದಿನಗಳಲ್ಲಿ ನಡೆಯುವ ದಾಸೋಹಕ್ಕೆ ದಿನವೊಂದಕ್ಕೆ ಕನಿಷ್ಠ ೬೦,೦೦೦ ರೂಪಾಯಿ ವೆಚ್ಚ ತಗಲುತ್ತದೆಂದು ತಿಳಿದು ಬಂದಿದೆ. ಅಂದರೆ ಒಂದು ವರ್ಷದ ದಾಸೋಹಕ್ಕೆ ಬೇಕಾಗುವ ಹಣದ ಪ್ರಮಾಣ ಎರಡು ಮೂರು ಕೋಟಿ ರೂಪಾಯಿಗಳನ್ನು ಮೀರಿಸುತ್ತದೆ. ಇದೆಲ್ಲವೂ ಶ್ರೀಗಳವರ ತಪಃ ಶಕ್ತಿಯ ಪ್ರಭಾವದಿಂದ ಪವಾಡ ಸದೃಶವಾಗಿ ಒದಗಿಬರುತ್ತದೆ. ಇದೆಲ್ಲವನ್ನೂ ಗಮನಕ್ಕೆ ತಂದುಕೊಂಡಾಗ, ನಾವು ಇಪ್ಪತ್ತನೆಯ ಶತಮಾನದ ಸಿದ್ಧಗಂಗಾ ಮಠದಲ್ಲಿರುವೆವೂ ಅಥವಾ ೧೨ನೇ ಶತಮಾನದ ಮಹಾಮನೆಯಲ್ಲಿರುವೆವೋ ಎಂಬ ಅನುಮಾನವನ್ನುಂಟು ಮಾಡುತ್ತದೆ.



ಪ್ರಸಾದ ಸಿದ್ಧತೆಯನ್ನು ವೀಕ್ಷಿಸುತ್ತಿರುವ ಪೂಜ್ಯ ಶ್ರೀ ಶ್ರೀಗಳವರು

### *ಶ್ರೀಗಳವರ ದಿನಚರಿ*

ಶ್ರೀಗಳ ಪ್ರತಿನಿತ್ಯದ ದಿನಚರಿ ೧೨ನೆಯ ಶತಮಾನದ ಶರಣರ ಜೀವನವನ್ನು ನೆನಪಿಗೆ ತರುತ್ತದೆ. ಪ್ರತಿದಿನವೂ ಶ್ರೀಗಳು ದಾಸೋಹದ ಮೇಲ್ವಿಚಾರಣೆ, ಮಠದ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳ ವ್ಯವಸ್ಥೆಯ ಪರಿಶೀಲನೆ ಮತ್ತು ಮಠಕ್ಕೆ ಆಗಮಿಸುವ ಭಕ್ತಾದಿಗಳಿಗೆ ಮಾರ್ಗದರ್ಶನ ಮುಂತಾದ ಕಾರ್ಯಾಚರಣೆಗಳನ್ನು ಮುಗಿಸಿ ರಾತ್ರಿ ಹನ್ನೊಂದು ಗಂಟೆಗೆ ವಿಶ್ರಾಂತಿಗಾಗಿ ತೆರಳುತ್ತಾರೆ. ಮತ್ತೆ ಕೇವಲ ನಾಲ್ಕು ಗಂಟೆಯ ನಂತರ ಅಂದರೆ ಬೆಳಗಿನ ಜಾವ ೩. ಗಂಟೆಗೆ ಅವರ ಲಿಂಗಪೂಜೆ ಪ್ರಾರಂಭವಾಗುತ್ತದೆ. ಈ ವಿಷಯದಲ್ಲಿ ಅವರು 'ಹೊತ್ತಾರೆ ಎದ್ದು, ಅಗ್ಗವಣಿ ಪತ್ತರೆಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ' ಎಂದು ಬಸವಣ್ಣನವರು ಆಚರಿಸಿ ತೋರಿಸಿದ್ದನ್ನು ಅಕ್ಷರಶಃ ಪಾಲಿಸುತ್ತಾರೆ. ಈ ರೀತಿ ಬೆಳಗಿನ ೩ ಗಂಟೆಗೆ ಮೂರು ತಾಸು ಮಧ್ಯಾಹ್ನ ಒಂದೂವರೆ ತಾಸು ಹಾಗೂ ರಾತ್ರಿ ಒಂದೂವರೆ ತಾಸು ಹೀಗೆ ಪ್ರತಿದಿನ ಒಟ್ಟು ೬ ತಾಸು ಸಮಯ ಅವರು ಲಿಂಗಾನುಸಂಧಾನ ನಡೆಸಿ ಶಿವಯೋಗದಲ್ಲಿ ಅತ್ಯುನ್ನತ ಸಿದ್ಧಿಯನ್ನು ಪಡೆದು ನಡೆದಾಡುವ ದೇವರಾಗಿ ನಮ್ಮ ಮಧ್ಯದಲ್ಲಿದ್ದಾರೆ. ಇವರ ಲಿಂಗಪೂಜೆ ಬಸವಣ್ಣನವರ ಪೂಜೆಯನ್ನು ನೆನಪಿಗೆ ತರುತ್ತದೆ.

*ಅಷ್ಟವಿಧಾರ್ಚನೆ ಷೋಡಶೋಪಚಾರ ಮಾಡುವುದು,*
*ಮಾಡಿದ ಪೂಜೆಯ ನೋಡುವುದಯ್ಯ,*
*ಶಿವತತ್ವ ಗೀತ ಹಾಡುವುದು,*

ಶ್ರೀವಾಣಿ

ಮಾನವಪ್ರಜ್ಞೆ ಜಾಗೃತವಾಗದ ಹೊರತು ಇಂದಿನ ಸಮಸ್ಯೆಗಳಿಗೆ ಪರಿಹಾರ ಕಾಣದು.



*ಶಿವನ ಮುಂದೆ ನಲಿದಾಡುವುದಯ್ಯ,*
*ಭಕ್ತಿ ಸಂಭಾಷಣೆಯ ಮಾಡುವುದು*
*ನಮ್ಮ ಕೂಡಲಸಂಗನ ಕೂಡುವುದು.*

ಇವರು ಪ್ರತಿದಿನ ೪ ಗಂಟೆ ನಿದ್ರೆ ಮಾಡಿದರೂ ಅವರು ಯೋಗ ಸಾಮರ್ಥ್ಯ ಇವರನ್ನು ೯೬ ವರ್ಷದ ತರುಣನನ್ನಾಗಿಯೇ ಇರಿಸಿದೆ.

ಶ್ರೀಗಳು ಪ್ರತಿದಿನ ಭಕ್ತರ ಆಹ್ವಾನದ ಮೇರೆಗೆ ಅವರ ಮನೆಗಳಿಗೆ ದಯಮಾಡಿಸಿ ಲಿಂಗಪೂಜೆಗೈದು, ಅವರು ದಿವ್ಯಜೀವನದತ್ತ ಸಾಗಲು ಮಾರ್ಗದರ್ಶನ ಮಾಡುತ್ತಿದ್ದಾರೆ. "ಬಸವನಿಂದಾಧ್ಯಾತ್ಮವೇ ಪಸರಿಸಿತು. ಲೋಕದೊಳಂತು ಕಾರಣ ಬಸವನೇ ಪರದೈವವೆಂದ ಗುರುರಾಯ" ಎಂದು ಚಾಮರಸನು ಬಸವಣ್ಣನವರನ್ನು ಕುರಿತು ಹೇಳಿದ ಮಾತು ಶ್ರೀಗಳವರಿಗೂ ಅನ್ವಯಿಸುತ್ತದೆ. ಶ್ರೀಗಳು ಭಕ್ತರ ಮನೆಯಲ್ಲಿ ನಡೆಸಿದ್ದ ಇಂಥ ಒಂದೆರಡು ಪೂಜೆಗಳಲ್ಲಿ ಭಾಗವಹಿಸುವ ಸುದೈವ ನನಗೂ ಒದಗಿಬಂದಿತ್ತು.

### *ಗ್ರಾಮಾಂತರ ಬಸವಜಯಂತಿ*

ಬಸವತತ್ವ ಪ್ರಚಾರಕ್ಕಾಗಿ ಇವರು ಅನುಸರಿಸುವ ರೀತಿ ವಿನೂತನವಾದದ್ದು. ನಾಟಕ ಪ್ರದರ್ಶನ ಪ್ರಚಾರಕ್ಕೆ ಒಳ್ಳೆಯ ಪರಿಣಾಮಕಾರಿ ಮಾಧ್ಯಮ. ಶ್ರೀಗಳು ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕವನ್ನು ವರ್ಷದುದ್ದಕ್ಕೂ ಹಳ್ಳಿ-ಹಳ್ಳಿಗಳಲ್ಲಿ ಪ್ರದರ್ಶನಗೊಳ್ಳುವಂತೆ ಮಾಡಿ ಬಸವಣ್ಣನವರ ವಿಶ್ವಮಾನ್ಯ ತತ್ವಗಳನ್ನು ಜನ ಬದುಕಲೆಂದು ಪ್ರಚಾರ ಮಾಡುವ ವ್ಯವಸ್ಥೆ ಮಾಡಿದ್ದಾರೆ. ಇಂಥ ಎಲ್ಲಾ ಕಲಾವಿದರನ್ನು ಪ್ರದರ್ಶನಗಳಲ್ಲಿ ಪೂಜ್ಯರು ಸ್ವತಃ ಜನರನ್ನು ಪ್ರೋತ್ಸಾಹಿಸುತ್ತಾರೆ. ಜನರಿಗೆ ಮಾರ್ಗದರ್ಶನ ನೀಡುತ್ತಾರೆ. ಶ್ರೀಮಠದ ಕಲಾವಿದರು ಗ್ರಾಮಾಂತರ ಬಸವಜಯಂತಿ ಅಂಗವಾಗಿ ಜಗಜ್ಯೋತಿ ಬಸವೇಶ್ವರರ ೬೫೦ಕ್ಕೂ ಹೆಚ್ಚು ಪ್ರದರ್ಶನಗಳನ್ನು ನೀಡಿದ್ದಾರೆ. ಈ ಎಲ್ಲಾ ಪ್ರದರ್ಶನಗಳಲ್ಲೂ ಪೂಜ್ಯ ಶ್ರೀ ಶ್ರೀಗಳವರು ಭಾಗವಹಿಸಿರುವುದು, ಭಾಗವಹಿಸುತ್ತಿರುವುದು ಪೂಜ್ಯ ಶ್ರೀಗಳಿಗೆ ಬಸವಣ್ಣನವರ ಆದರ್ಶ-ಸಿದ್ಧಾಂತಗಳನ್ನು ಜನಸಾಮಾನ್ಯರಿಗೂ ಮುಟ್ಟಿಸುವ ಕಳಕಳಿ, ಮಹತ್ವಾಕಾಂಕ್ಷೆಯ ದ್ಯೋತಕ. ಇಂಥ ಒಂದು ನಾಟಕ ಪ್ರದರ್ಶನದಲ್ಲಿ ಶ್ರೀಗಳು ರಾತ್ರಿಯೆಲ್ಲಾ ಜಾಗರಣೆ ಮಾಡಿ ಬೆಳಗ್ಗೆ ಆರು ಗಂಟೆಗೆ ನಮ್ಮ ಭಕ್ತಬಂಧುಗಳೊಬ್ಬರ ಮನೆಗೆ ಪೂಜೆಗೆ ದಯಮಾಡಿಸಿದ ಘಟನೆ ನನ್ನ ಅನುಭವದ ಮಾತಾಗಿದೆ. ಇಂಥ ನಾಟಕ ಪ್ರದರ್ಶನಗಳಿಂದ ಜನರಲ್ಲಿ ಧರ್ಮ ಜಾಗೃತಿಯುಂಟಾಗಿ, ಅವರು ಬಸವತತ್ವಗಳನ್ನು ಆಚರಿಸಿ, ತಮ್ಮ ಜೀವನ ರೀತಿಯನ್ನು ತಿದ್ದಿಕೊಳ್ಳುತ್ತ ಸಾಗುತ್ತಿದ್ದಾರೆ. ಶ್ರೀಮಠದಿಂದ ಹೊರಡುವ 'ಸಿದ್ಧಗಂಗಾ' ಮಾಸಪತ್ರಿಕೆಯೂ ಕೂಡ ಶರಣ ಸಾಹಿತ್ಯ ಸಂಸ್ಕೃತಿ ಪ್ರಚಾರದಲ್ಲಿ ಅಮೋಘವಾದ ಸೇವೆ ಸಲ್ಲಿಸುತ್ತಲಿದೆ.

### *ಶಿಕ್ಷಣ ಸಂಸ್ಥೆಗಳು*

ಲೌಕಿಕ ಹಾಗೂ ಪಾರಮಾರ್ಥಗಳು ಒಂದೇ ನಾಣ್ಯದ ಎರಡು ಮುಖಗಳು. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ಆಧ್ಯಾತ್ಮ ಸಂಸ್ಕಾರದ ಜೊತೆಗೆ ಕಾಲ ಧರ್ಮಕ್ಕನುಸಾರವಾಗಿ ಜನರಿಗೆ ಆಧುನಿಕ ಶಿಕ್ಷಣವನ್ನು ನೀಡಿ ಅವರ ಲೌಕಿಕ ಪ್ರಗತಿಗೆ ಕಾರಣವಾಗಲು ಶ್ರೀಗಳು ಅನೇಕ ಶಾಲಾ ಕಾಲೇಜುಗಳನ್ನು,

**ಶ್ರೀವಾಣಿ**

*ಆತ್ಮಾವಲೋಕನದ ಅರಿವಿನ ಅಭಾವದಿಂದ ಸಮಾಜವಿಂದು ನೈತಿಕತೆಯ ದಿವಾಳಿಯನ್ನನುಭವಿಸುತ್ತಿದೆ.*



ಹಾಸ್ಟೆಲ್‌ಗಳನ್ನು ಸ್ಥಾಪಿಸಿ ಶಿಕ್ಷಣ ಪ್ರಸಾರದಲ್ಲಿ ತನ್ಮೂಲಕ ಜ್ಞಾನ ದಾಸೋಹದಲ್ಲಿ ತಮ್ಮದೇ ಆದ ದಿಗ್ವಿಜಯವನ್ನು ಸಾಧಿಸಿದ್ದಾರೆ. ಈ ಮಠದಿಂದ ಸ್ಥಾಪಿತವಾದ ಶಿಕ್ಷಣ ಸಂಸ್ಥೆಗಳ ಸಂಖ್ಯೆ ೧೨೧ಕ್ಕಿಂತಲೂ ಅಧಿಕ ಎಂದು ಹೇಳಿದರೆ ಯಾರಿಗಾದರೂ ಆಶ್ಚರ್ಯವಾಗದೇ ಇರದು. ಯಾವ ಭೇದವಿಲ್ಲದೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರು, ಹಿಂದುಳಿದವರು ಹಾಗೂ ಅಂಗವಿಕಲರು ಶಿಕ್ಷಣ ಪಡೆಯುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಇವರು ಸಲ್ಲಿಸುತ್ತಿರುವ ಸೇವೆಯನ್ನು ಮನಗಂಡು ಆಗ ರಾಷ್ಟ್ರಪತಿಗಳಾಗಿದ್ದ ಮಾನ್ಯ ಶ್ರೀ ಶಂಕರ್‌ದಯಾಳ್ ಶರ್ಮರವರು ಸಮಾಜಕ್ಕೆ, ದೇಶಕ್ಕೆ, ಅದರಲ್ಲಿಯೂ ಶಿಕ್ಷಣ ಕ್ಷೇತ್ರಕ್ಕೂ ಯಾವ ರೀತಿ ಸೇವೆ ಸಲ್ಲಿಸಬೇಕೆಂಬುದಕ್ಕೆ ಇದೊಂದು ಮಾದರಿ ಸಂಸ್ಥೆಯೆಂದು ಉದ್ಗಾರ ತೆಗೆದಿದ್ದರು. ಇದೇ ಅಭಿಪ್ರಾಯವನ್ನು ಪ್ರಧಾನ ಮಂತ್ರಿಗಳಾದ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು ರೋಮಿನಲ್ಲಿ ಪೋಪ್‌ಪಾಲ್‌ರಲ್ಲಿ ವ್ಯಕ್ತಪಡಿಸಿದ್ದರೆಂದು ವರದಿಯಾಗಿದೆ. ಇತ್ತೀಚೆಗೆ (೧೯೯೭ ಮಾರ್ಚ್) ಶ್ರೀಗಳು ಈ ಮಠದ ಅಧಿಕಾರ ವಹಿಸಿಕೊಂಡ ೬೦ ವರ್ಷದ ನೆನಪಿಗಾಗಿ ಸುಮಾರು ೫ ಕೋಟಿ ರೂಪಾಯಿ ವೆಚ್ಚದಲ್ಲಿ ಸುಮಾರು ೨೦೦೦ ವಿದ್ಯಾರ್ಥಿಗಳಿಗೆ ಅನುಕೂಲವಾಗುವ ವಸತಿ ಸೌಕರ್ಯವನ್ನೊದಗಿಸುವ ವಿದ್ಯಾರ್ಥಿ ನಿಲಯವನ್ನು, ಒಂದೇ ವೇಳೆಗೆ ೩.೦೦೦ ಊಟದ ಸಭಾಂಗಣವನ್ನು ನಿರ್ಮಿಸಿದ್ದು, ಇದು ೧೯೯೭ ಮಾರ್ಚ್ ೨೨ನೇ ತಾರೀಖಿನಂದು ಆಗ ರಾಷ್ಟ್ರಪತಿಗಳಾಗಿದ್ದ ಶ್ರೀ ಶಂಕರ್‌ದಯಾಳ್‌ಶರ್ಮ ಇವರಿಂದ ಉದ್ಘಾಟನೆಗೊಂಡಿದೆ. ಈ ಮಠದಲ್ಲಿದ್ದು, ಇಲ್ಲಿಯ ಹಾಸ್ಟೆಲ್‌ಗಳಲ್ಲಿದ್ದು, ಇಲ್ಲಿಯ ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಣ ಪಡೆದ ಅಸಂಖ್ಯಾತ ವ್ಯಕ್ತಿಗಳು ಈಗ ಸರ್ಕಾರೀ ಹುದ್ದೆಗಳಲ್ಲಿ, ಸಾಮಾಜಿಕ ಹಾಗೂ ರಾಜಕೀಯ ರಂಗದಲ್ಲಿ ಪ್ರತಿಷ್ಠಿತ ಸ್ಥಾನಗಳಿಸಿ, ಮಠದ ಕೀರ್ತಿ ಪತಾಕೆಯನ್ನು ಎತ್ತಿ ಹಿಡಿದಿದ್ದಾರೆ.

ವಜ್ರಮಹೋತ್ಸವ ನೆನಪಿನ ಬೃಹತ್ ಪ್ರಸಾದ ಮಂದಿರ

ಒಟ್ಟಿನಲ್ಲಿ ಶ್ರೀಗಳಲ್ಲಿ ಬಸವಣ್ಣನವರ ಸಮಗ್ರ ಕ್ರಾಂತಿಯೋಗ, ಸಿದ್ಧರಾಮರ ಕರ್ಮಯೋಗ ಹಾಗೂ ಅಲ್ಲಮರ ವೈರಾಗ್ಯ ಇವುಗಳು ಮುಪ್ಪುರಿಗೊಂಡು ಶರಣ ಧರ್ಮದ ಸಾಕಾರಮೂರ್ತಿಗಳಾಗಿ ಧರ್ಮದ, ಸಮಾಜದ ಹಾಗೂ ರಾಷ್ಟ್ರದ ಉನ್ನತಿಗೆ ಕಾರಣರಾಗಿದ್ದಾರೆ. ಶರಣ ಮಾರ್ಗದಲ್ಲಿ ನಡೆದು ಸಾಮಾನ್ಯ ಜನರ ಸರ್ವತೋಮುಖ ಅಭಿವೃದ್ಧಿಗಾಗಿ ಇವರು ಶ್ರಮಿಸಿದ ರೀತಿಯನ್ನು ಭಾರತದ ಎಲ್ಲಾ ಮಠಾಧೀಶರು ಅನುಸರಿಸುವುದಾದರೆ ನಮ್ಮ ರಾಷ್ಟ್ರದ ಬಹಳಷ್ಟು ಸಮಸ್ಯೆಗಳಿಗೆ ಪರಿಹಾರ ದೊರಕುವುದರಲ್ಲಿ ಸಂದೇಹವಿಲ್ಲ. ಇಂಥ ಚರ ಜಂಗಮರ, ಪರಜಂಗಮರ, ಜ್ಞಾನ ಜಂಗಮರ ಸಂಖ್ಯೆ ಬೆಳೆಯಲಿ ಮನುಕುಲ ಉದ್ಧಾರವಾಗಲಿ.

★

**ಶ್ರೀವಾಣಿ**

*ಯಾರ ಸಂಬಂಧವಾದ ಪ್ರಸಾದವನ್ನು ಸ್ವೀಕರಿಸುತ್ತೇವೆಯೋ ಆ ಸಂಬಂಧವಾದ ಭಾವ ನಮ್ಮದಾಗುತ್ತದೆ. ಅಂಥದೇ ಜೀವನವಾಗುತ್ತದೆ.*

# 'ಪುರುಷ ಸೂಕ್ತ'ಕ್ಕೆ ಉದಾತ್ತ ವ್ಯಾಖ್ಯಾನ – ಚನ್ನವೀರ ಮಾಹೇಶ್ವರನಿಂದ



– ಡಾ. ಚಿದಾನಂದಮೂರ್ತಿ
ಪ್ರಸಿದ್ಧ ಸಂಶೋಧಕರು,
'೦. ೬/ಎ, ೪ನೆ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ
ವಿಜಯನಗರ, ೨ನೇ ಹಂತ,
ಬೆಂಗಳೂರು – ೫೬೦ ೦೪೦.

ಸಿದ್ಧಗಂಗೆ ಪ್ರವೇಶಿಸುತ್ತಿದ್ದಂತೆ ಎದುರಿನ ಬೆಟ್ಟದಡಿ, ಅದಕ್ಕೆ ಹೊಂದಿಕೊಂಡಂತೆ ಇದೆ ''ಶ್ರೀ ಸಿದ್ದಲಿಂಗೇಶ್ವರ ವೇದ ಪಾಠಶಾಲಾ''. ವೇದಗಳು ಹಿಂದೂ ಧರ್ಮದ ಗಂಗೋತ್ರಿ : ಅವುಗಳ ಬಗ್ಗೆ ವೀರಶೈವರೂ ಸೇರಿದಂತೆ ಎಲ್ಲ ಭಾರತೀಯರೂ ಗೌರವ ಭಾವನೆ ಹೊಂದಿದ್ದಾರೆ. ''ವೇದಕ್ಕೆ ಒರೆಯನಿಕ್ಕುವೆ ...'' ಎಂಬಂತಹ ಮಾತುಗಳು ಬಸವಣ್ಣನವರಲ್ಲಿ ಬಂದಿದ್ದರೂ ಅದೇ ಬಸವಣ್ಣ ''ಕೂಡಲಸಂಗಮನಲ್ಲದಿಲ್ಲವೆಂದಿತ್ತು ವೇದ'' ಎಂದಿದ್ದಾರೆ. ವೇದಗಳ ಬಗ್ಗೆ ಟೀಕೆ ಬಂದಿದ್ದರೆ ಅದಕ್ಕೆ ಕಾರಣ ವೇದಗಳು ಅಲ್ಲ, ವೇದಗಳನ್ನು ಬಳಸಿಕೊಂಡು ಅನೀತಿಯ ಬದುಕನ್ನು ಬದುಕುತ್ತಿದ್ದ ಜನ. ಹಲವೆಡೆ ಆಗಮಗಳ, ಕನ್ನಡ ವಚನಗಳ ಬಗ್ಗೆಯೂ ಟೀಕೆಗಳಿವೆ: ಅದಕ್ಕೆ ಕಾರಣ ವ್ಯಕ್ತಿಗಳು; ಮೂಲ ಕೃತಿಗಳಲ್ಲ ವೆಂಬುದನ್ನು ಹೇಳಬೇಕಾಗಿಲ್ಲ.

ಋಗ್ವೇದದ ''ಪುರುಷಸೂಕ್ತ''ವು ಹಲವು ಕಾರಣಗಳಿಗಾಗಿ ಪ್ರಸಿದ್ಧವಾಗಿದೆ. ಅದಕ್ಕೆ ಕೆಳದಿ ಅರಸರ ಆಶ್ರಯದಲ್ಲಿ ಕ್ರಿ.ಶ. ೧೬೫೦ರ ಚನ್ನವೀರ ಮಾಹೇಶ್ವರನು ''ನಿರಂಜನ ಜಂಗಮ ಭಾಗ್ಯ'' ಎಂಬ ಹೆಸರಿನ ಟೀಕೆಯನ್ನು ಬರೆದಿದ್ದಾನೆ. ಅದು ಹೀಗಿದೆ :

*''ಸಹಸ್ರ ಶೀರ್ಷಾ ಪುರುಷಃ*
*ಸಹಸ್ರಾಕ್ಷಃ ಸಹಸ್ರ ಪಾತ್*
*ಸ ಭೂಮಿಂ ವಿಶ್ವತೋ ವೃತ್ವಾ*
*ಅತ್ಯತಿಷ್ಠದ್ದಶಾಂಗುಲಮ್''*

ಇದು ಪುರುಷಸೂಕ್ತದ ಒಂದು ಭಾಗ. ಇದಕ್ಕೆ ಚನ್ನವೀರ ಮಾಹೇಶ್ವರನ ಟೀಕೆ ಹೀಗಿದೆ –

''**ಪು**ರುಷಃ = ಇರುತ್ತಿದ್ದ ನಿರಂಜನ ಜಂಗಮಂ ಪುರುಷನೆನಿಸಿಕೊಂಬುವನೆ ಶೈವರ್ಗೆ ಶಿವಂ, ಶಾಕ್ತೇಯರ್ಗೆ ಶಕ್ತಿ, ಕಪಾಲಿಕರ್ಗೆ ಕಪಾಲಿ, ಗಾಣಪತ್ಯರ್ಗೆ ಗಣಪತಿ, ವೈಷ್ಣವರ್ಗೆ ವಿಷ್ಣು, ಸೌರರ್ಗೆ ಸೂರ್ಯ, ಸಾಂಖ್ಯರ್ಗೆ ಪಂಚವಿಂಶತಿ ತತ್ವಸಂಖ್ಯೆ, ಲಿಂಗಾಂಗಿ ಮಹಾಪ್ರತಿ ಮಾಯಾವಾದಿ ಕಾಳಮುಖಿ ಭಾಗವತ ಭೇದವಾಗಿ ಸತ್ಯಯೋಗಿ ಕಲಾಂಗಿ ಸಿದ್ಧಯೋಗಿ ಇವು ಮೊದಲಾದವುಗಳ ವೈದಿಕಾವೈದಿಕಾಂತರ ದರ್ಶನಸ್ಥರ್ಗೆ ತತ್ತದ್ರೂಪನಾಗಿರ್ಪಂ''.

**ಎಂ**ದರೆ, ಋಗ್ವೇದದ ''ಪುರುಷ''ನು ಶೈವರಿಗೆ ಶಿವ, ವೈಷ್ಣವರಿಗೆ ವಿಷ್ಣು, ಸೂರ್ಯರಾಧಕರಿಗೆ ಸೂರ್ಯ – ಹೀಗೆ ಜಗತ್ತಿನ ಬೇರೆ ಬೇರೆ ಆರಾಧಕರಿಗೆ ಅವರವರ ಆರಾಧ್ಯವಸ್ತುವಾಗಿ ಕಾಣಿಸುತ್ತಾನೆ ಎಂಬ ವ್ಯಾಖ್ಯಾನವು ಬಹುಗಮನಾರ್ಹ. ಅದೇ ವ್ಯಾಖ್ಯಾನವನ್ನು ಮುಂದುವರಿಸಿ ಕ್ರಿಶ್ಚಿಯನ್ನರಿಗೆ ಏಸುಕ್ರಿಸ್ತ, ಮುಸ್ಲಿಮರಿಗೆ ಅಲ್ಲಾ, ಫಾರ್ಸಿಗಳಿಗೆ ಝರತುಷಟ್ರ, ಜೈನರಿಗೆ ಜಿನ, ಬೌದ್ಧರಿಗೆ ಬುದ್ಧ ಇತ್ಯಾದಿ ಅರ್ಥಗಳನ್ನು ಅಲ್ಲಿಗೆ ಸೇರಿಸಿದರೂ ಅದನ್ನೆಲ್ಲಾ ತಡೆದುಕೊಳ್ಳುವ ಸಾಮರ್ಥ್ಯ ಆ ವ್ಯಾಖ್ಯಾನಕ್ಕಿದೆ.

**ಆ** ವ್ಯಾಖ್ಯಾನದ ಆಶಯದ ಹಲವು ರಚನೆಗಳು ಹಿಂದೆ ಬಂದಿವೆ. ''ಅವರವರ ದರುಶನಕೆ, ಅವರವರ ವೇಷಕ್ಕೆ, ಅವರವರಿಗೆಲ್ಲ ಗುರು ನೀನೊಬ್ಬನೆ ...'' ಎಂಬ ಮುಪ್ಪಿನ ಷಡಕ್ಷರಿಯ ಹಾಡನ್ನಾಗಲಿ, ''ಯಃ ಶೈವಾಃ ಸಮುಪಾಸತೇ ಶಿವ, ಬ್ರಹ್ಮೇತಿ ವೇದಾಂತಿನೋ...'' ಎಂಬ ಬೇಲೂರು ಶಾಸನವನ್ನಾಗಲೀ ಇಲ್ಲಿ ನೆನೆಯಬಹುದು. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ''ಪುರುಷಸೂಕ್ತ''ಕ್ಕೆ ಬಂದಿರುವ ಎಲ್ಲ ಭಾಷೆಗಳ ವ್ಯಾಖ್ಯಾನಗಳಲ್ಲಿ ಕನ್ನಡ ಭಾಷೆಯ, ಮೇಲಿನ ವ್ಯಾಖ್ಯಾನ ಅತ್ಯುದಾತ್ತವಾದುದು ಎಂಬಲ್ಲಿ ಅನುಮಾನವಿಲ್ಲ. ಇದು ವೀರಶೈವರಿಗೆ, ಕನ್ನಡಿಗರಿಗೆ ಹೆಮ್ಮೆಯನ್ನು ತರುವ ವಿಷಯವಾಗಿದೆ.

**ಅಂ**ತಹುದೇ ಒಂದು ಉದಾತ್ತ ಮಾತು ಅಜ್ಞಾತ ಕೃತಿಕಾರನೊಬ್ಬನಿಂದ ರಚಿತವಾದ, ಕಾಲ ತಿಳಿಯದು, ಆದರೆ ಆಧುನಿಕ ಪೂರ್ವಯುಗದ, ಎಂದರೆ ಕ್ರಿ.ಶ. ೧೮೦೦ಕ್ಕಿಂತ ಹಿಂದಿನ ''ಬಸವೇಶ್ವರ ಸ್ತೋತ್ರ'' ಎಂಬ ಕಿರುಕೃತಿಯಲ್ಲಿ ಬಂದಿದೆ.

''ವಿಶ್ವಧರ್ಮವನೊಂದುಗೂಡಿಪ ವೀರಶೈವರ ಚಂದಿರಾ
ವಿಶ್ವಸುತ ವರ ವೇದ ಬೋಧಕ ವಿಬುಧಪ್ರಿಯ ಬಸವೇಶ್ವರಾ''

ಬಸವನನ್ನು ''ವಿಶ್ವಸುತ'' ಎಂದು ಕರೆದಿರುವುದು, ಅವನು ವಿಶ್ವದ ಎಲ್ಲ ಧರ್ಮಗಳನ್ನು ತನ್ನ ವೀರಶೈವ ಧರ್ಮದಲ್ಲಿ ಒಗ್ಗೂಡಿಸಿದನೆಂದು ಪ್ರಶಂಸಿರುವುದು ಆಧುನಿಕರಾದ ನಮ್ಮನ್ನು ಚಕಿತಗೊಳಿಸುತ್ತದೆ. ''ವಿಶ್ವಧರ್ಮ''ದ ಕಲ್ಪನೆಯಾಗಲಿ, ಬಸವನು ವಿಶ್ವದ ಹೆಮ್ಮೆಯ ವ್ಯಕ್ತಿ ಎಂಬ ಕಲ್ಪನೆಯಾಗಲಿ ಆಧುನಿಕ ಸ್ವತ್ತಲ್ಲವೆಂಬುದು ಸ್ವಯಂ ವೇದ್ಯವಾಗಿದೆ.

★

**ಶ್ರೀವಾಣಿ**

*ಸಹಜಪ್ರೀತಿ ಕಲ್ಲನ್ನೂ ಕರಗಿಸುತ್ತದೆ. ಕಟುಕನನ್ನು ಕರುಣಾಮಹಿಯನ್ನಾಗಿಸುತ್ತದೆ.*



# ದಿವ್ಯ ವ್ಯಕ್ತಿತ್ವ

– ಲಿಂ. ಡಾ. ಸಿದ್ಧಯ್ಯ ಪುರಾಣಿಕ
ಪ್ರಸಿದ್ಧ ಸಾಹಿತಿಗಳು

ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳೂ ತ್ರಿವಿಧ ದಾಸೋಹಮೂರ್ತಿಗಳು, ಮಹಾ ಮಹಿಮರೂ ಆದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಿಲವನ್ನು ಆ ಸಿದ್ಧಲಿಂಗೇಶ್ವರನೇ ಬಲ್ಲನಲ್ಲದೆ ನಮ್ಮಂಥವರು ಬಲ್ಲೆವೆಂದು ಸೊಲ್ಲಿಸಲಾದೀತೆ? ಮಾತು ಸೋತು ಶರಣಾಗತವಾಗುತ್ತದೆ ಶ್ರೀಗಳವರ ಸನ್ನಿಧಿಯಲ್ಲಿ! ಮಾತಿಗೆ ಮೀರಿದ ದಿವ್ಯವ್ಯಕ್ತಿತ್ವ ಅವರದು.

*'ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ,*
*ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷ,*
*ವಿಷಯದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ,*
*ಜ್ಞಾನದಲ್ಲಿ ಪರಮಾನಂಗ ನೆಲೆಗೊಂಡ ಬಳಿಕ*
*ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿರೋ!'*
*'ನಿಜವನರಿದ ನಿಶ್ಚಿಂತನೆ, ಮರಣದ ಗೆಲಿದ ಮಹಂತನೆ,*
*ಪರವನೊಳಕೊಂಡ ಪರಿಣಾಮಿಯೆ,*
*ಬಯಲಲೊದಗಿದ ಭರಿತನೆ,*
*ಗುಹೇಶ್ವರಲಿಂಗ ನಿರಾಳವನೊಳಕೊಂಡು ಸಹಜನೆ'*

''ಇಂಥ ವಚನಗಳಿಗೆ ನೈಜ ನಿದರ್ಶನವಾಗಿ ಇಂದೂ ಯಾರಾದರೂ ತೊಳಗಿ ಬೆಳಗುತ್ತಿರುವರೆ?' ಎಂದು ಯಾರಾದರೂ ಕೇಳಿದರೆ ಸಿದ್ಧಗಂಗೆಗೆ ಹೋಗಿ ಶ್ರೀ ಶಿವಕುಮಾರ ಶಿವಯೋಗಿಗಳವರ ದರ್ಶನ ಪಡೆದು ನೋಡಿರಿ ಎಂದೇ ಉತ್ತರಿಸಬೇಕಾದೀತು! ಅರ್ಧ ಶತಮಾನದ ತ್ರಿವಿಧ ತಪದ, ತ್ರಿವಿಧ ದಾಸೋಹದ, ತ್ರಿವಿಧ ಲಿಂಗಾರ್ಚನೆಯ ಸಿದ್ಧಿಶ್ರೀ 'ಸಿದ್ಧಗಂಗಾಶ್ರೀ'ಯಾಗಿ ವಿರಾಜಿಸುತ್ತಿರುವುದನ್ನು ಅವರಲ್ಲಿ ಕಂಡು ಕೃತಾರ್ಥರಾಗುವರು. ಇಂಥವರೊಬ್ಬರು ಇಂದು ನಮ್ಮ ಮಧ್ಯದಲ್ಲಿರುವುದೇ ನಮ್ಮೆಲ್ಲರ ಪರಮಭಾಗ್ಯ! ಕತ್ತಲೆ ಗಾಢವಾದಂತೆ ಜ್ಯೋತಿಯ ಕಾಂತಿ ಹೆಚ್ಚುವಂತೆ ಸುತ್ತಲೂ ದುರಿತ ದುಷ್ಕರ್ಮತಮಂದ ಹೆಚ್ಚುತ್ತಿರುವಂತೆಯೇ ಈ ಮಹಾಮಹಿಮರ ಪ್ರಭೆಯೂ ಹೆಚ್ಚುತ್ತಲಿದೆ!

ಈ ಸರ್ವಾಂಗ ಲಿಂಗಿಯಲ್ಲಿ ಯಾವುದನ್ನು ಮೆಚ್ಚುವುದೆಂದು ದಿಗ್ಭ್ರಮೆಯಾಗುತ್ತದೆ. ನಿಶ್ಚಿತ ಜ್ಞಾನವನ್ನೆ? ನಿರ್ಮಲ ಕ್ರಿಯೆಯನ್ನೆ? ಉಜ್ವಲ ವೈರಾಗ್ಯವನ್ನೆ? ಶಮದಮಾದಿ ದೈವೀಸಂಪತ್ತನ್ನೆ? ಬಹುಬಾಷಾ ಪಾರಂಗತಿಯನ್ನೆ? ಪವಿತ್ರ ಜೀವನವನ್ನೆ? ಸಕಲ ಜೀವರಾಶಿಗಳನ್ನೂ ತನ್ನ ತೆಕ್ಕೆಯಲ್ಲಿ ಒಳಗೊಳ್ಳುವ ಅಪಾರ ಅನುಕಂಪೆಯನ್ನೆ? ಚೆಕ್ಕಸ ಬೆರಗುಗೊಳಿಸುವ ಶಿಕ್ಷಣ ಸಂಸ್ಥೆಗಳ ಸಂಸ್ಥಾಪನೆಯನ್ನೆ? ಪಂಡಿತ ಪಾಮರರಿಬ್ಬರನ್ನೂ ಏಕ ಪ್ರಕಾರವಾಗಿ ಮೆಚ್ಚಿಸುವ ಮಾತುಗಾರಿಕೆಯನ್ನೆ? ವೈಜ್ಞಾನಿಕ ದೃಷ್ಟಿಯನ್ನೆ? ಆಧ್ಯಾತ್ಮಿಕ ಔನ್ನತ್ಯವನ್ನೆ? ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆಗಳನ್ನೆ? ವಿದ್ಯಾರ್ಥಿಗಳ ಮೇಲಣ ವಾತ್ಸಲ್ಯವನ್ನೆ? ರಾಷ್ಟ್ರನಿರ್ಮಾಣ ಕಾರ್ಯದುರಂಧರತೆಯನ್ನೆ? ದೀನಬಂಧುತ್ವವನ್ನೆ? ಕವಿ ಕಲಾವಿದ ವಿದ್ವಾಂಸರಿಗೆ ನಿರಂತರ ನೀಡುತ್ತಿರುವ ಆಶ್ರಯವನ್ನೆ? ಸಾಹಿತ್ಯ ಸಂಸ್ಕೃತಿಗಳ ಪೋಷಣೆಯನ್ನೆ? ಸಂಘಟನಾ ಶಕ್ತಿಯನ್ನೆ? ಶಿವಮಂತ್ರ ಸಿದ್ಧಿಯನ್ನೆ? ಎಷ್ಟು ಜನರು ಬಂದು ಬೇಡಿ ಕಾಡಿದರೂ, ಎಂಥ ವಿಘ್ನಗಳು ಎದುರಾದರೂ ಎಳ್ಳಷ್ಟೂ ಬೇಸರ, ಮುನಿಸು, ದಣಿವುಗಳನ್ನು ತೋರದ ಸದಾ ಸುಪ್ರಸನ್ನವದನವನ್ನೆ? ಬಹುವಿಷಯ ಪರಿಣತಿಯನ್ನೆ? ಜಗಳಗಳನ್ನು ಬಗೆಹರಿಸುವ ವ್ಯವಹಾರ ಕುಶಲತೆಯನ್ನೆ? ದಿನದಿನವೂ ಎಣಿಕೆಯಿಲ್ಲದಂತೆ ಬರುವ ಭಕ್ತಿ ವೈಯಕ್ತಿಕ ಸಮಸ್ಯೆಗಳಿಂದ ಆರಂಭಿಸಿ ದಾಸೋಹ, ವಿದ್ಯಾರ್ಥಿ ನಿಲಯ, ಶಾಲೆ ಕಾಲೇಜುಗಳ ಜಟಿಲ ಸಮಸ್ಯೆಗಳವರೆಗೆ ಎಲ್ಲವನ್ನೂ ಲೀಲಾಜಾಲವಾಗಿ ಪರಿಹರಿಸುವ ಪರಮಾದ್ಭುತವನ್ನೆ? ಉದ್ಧರಣೆಗಳನ್ನು ಬರೆಯುವುದರಿಂದ ಸರ್ವೋದ್ಧಾರದ ಸಮಗ್ರ ಯೋಜನೆಗಳವರೆಗೆ ಸರ್ವಕಾರ್ಯಗಳಲ್ಲಿಯೂ ಒಡಮೂಡುವ ಕಾಯಕನಿಷ್ಠೆಯನ್ನೆ? ಗಡಿಯಾರವೂ ನಾಚಿಕೊಳ್ಳುವಂತಹ ಸಮಯ ಪರಿಪಾಲನೆಯನ್ನೆ? ಕಾರಣ ವಿಜಯ, ಜಿತೇಂದ್ರಿಯತ್ವಗಳನ್ನೆ? ಆಲೋಚಿಸಿದನಿತೂ ಅಪಾರವಾಗಿ ತೋರುವ ಈ ಆಧ್ಯಾತ್ಮ ಸೂರ್ಯರ ಅಗಾಧವಾದ, ಅವರ್ಣನೀಯವಾದ ವ್ಯಕ್ತಿತ್ವದ ಎಲ್ಲ ಅಂಶಗಳನ್ನೂ ಗುರುತಿಸಿ ಅವುಗಳ ಒಟ್ಟು ಬೆಲೆಯನ್ನು ಕಟ್ಟಬಲ್ಲವರಾರು?

★

**ಶ್ರೀವಾಣಿ**

*ಅಧ್ಯಯನಶೀಲನಾಗದ ಶಿಕ್ಷಕ ವಿದ್ಯಾರ್ಥಿಗಳನ್ನು ಸ್ಫೂರ್ತಿಗೊಳಿಸಲಾರ. ಅಧ್ಯಯನ ವಿಮುಖನಾದ ವಿದ್ಯಾರ್ಥಿ ಉತ್ತಮ ಭವಿಷ್ಯ ಕಾಣಲಾರ.*



# ದಾಸೋಹ ಯೋಗ


– ಎಂ.ಜಿ. ನಾಗರಾಜ್

ಇತಿಹಾಸ ತಜ್ಞರು ಮತ್ತು ಪ್ರಸಿದ್ಧ ವಿದ್ವಾಂಸರು,
೨೨೧, ೬೮ನೇ ಕ್ರಾಸ್,
೫ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು – ೫೬೦ ೦೧೦.


ಸ್ವ-ತನಗಾಗಿ ಬದುಕು ಮಾಡುವುದು ಉಳಿವಿಗೆ ಸರಿ. ಅಸ್ತಿತ್ವಕ್ಕೆ ಅದೊಂದು ಅಸ್ತಿಭಾರ ದಿಟ. ಸ್ವಹಿತ ಸ್ವಾರ್ಥವಾಗದೆ, ಸ್ವಶ್ರೇಯವೆನಿಸಬೇಕು. ಸ್ವಪ್ರೇಮವೆನಿಸುವುದಲ್ಲ ಬದುಕಿನ ಗುರು. ಶ್ರೇಯದಲ್ಲಿ ಒಳಿತಿನ ಕನಸುಗಳಿರುತ್ತವೆ; ಪ್ರೇಮದಲ್ಲಿ ಅದೆಲ್ಲ ಇರಲೇಬೇಕೆಂಬುದಿಲ್ಲ. ತಾನು ಚೆಂದವೋ ಮೂರುಲೋಕ ಚಂದವೋ ಎಂಬಂಥ ಕೇವಲ ವ್ಯಕ್ತಿ ಕೇಂದ್ರೀಕೃತ ನೆಲೆ ಅದು. ಇನ್ನೊಬ್ಬರ ಹಿತವನ್ನೂ ತನ್ನದರಂತೆ ಕಾಯಬೇಕೆನ್ನುವ ಕನಸೂ ಇಲ್ಲದಿದ್ದರೆ, ಅದನ್ನು ನನಸಾಗಿಸುವ ಬಗೆ ಎಲ್ಲಿ? ಇಲ್ಲಿ ಸೋಹಂಬಿಟ್ಟು, ಅಂದರೇ ತಾನೇ ಎಂಬ ಅಹಂಕಾರಬಿಟ್ಟು, ಲೋಕಹಿತಕಾರಿಯಾದ ದಾಸೋಹಂ ಎಂದರೆ ಅದು ಮೌಲಿಕ. ಆತನ ಬಾಳುವುದಲ್ಲದೆ, ಪರರನ್ನು ಬಾಳಿಸಲೆಳಸುವುದು. ಹೀಗೆಂದಾಗ, ಸೇವೆಯ ಪರಿಕಲ್ಪನೆ ನಮ್ಮ ವಲಯದಲ್ಲಿ ಎತ್ತತ್ತಲಿಂದಲೂ ಮುತ್ತುತ್ತದೆ. ಅದು ಮನಸ್ಸಿಗೂ ಹರ್ಷ; ದೇಹದ ಆರೋಗ್ಯಕ್ಕೂ ಹರ್ಷ. ಇದರಿಂದ ಒಳಗಿನ ಗರ್ವ, ನಗಣ್ಯವಾಗುತ್ತದೆ. ಒಳಗಿನ ದುರಹಂಕಾರ ನಿಸತ್ವಗೊಳ್ಳುತ್ತದೆ. ಅಂದರೆ, ಮಾನವತೆಯ ಮೌಲ್ಯ ಅರಿವಾಗುತ್ತದೆ. ಮಾನವತೆ ಮುಂದಾದಾಗ, ಜೀವ ಜೀವಗಳ ನಡುವೆ ನೆಮ್ಮದಿ, ಪ್ರೀತಿ ಬೆಳೆಯುತ್ತದೆ. ಜಗತ್ತಿನ ಕಲ್ಯಾಣಕ್ಕೆ ಲೇಸ ಬಯಸುವುದರಿಂದ ಒದಗುವ ಫಲಶ್ರುತಿ ಇದು. ಅಂತೇ ಶರಣರು 'ದಾಸೋಹ'ಕ್ಕೆ ಮಹತ್ವಕೊಟ್ಟರು; ಆಚರಿಸಿದರು.

ದಾಸೋಹ ಎಂದಾಗ ತನು ಮನದ ಗೆಯ್ಮೆ ಇಟ್ಟು ದುಡಿದುತಂದ ಉತ್ಪನ್ನದಿಂದ ಸಲ್ಲಿಸುವ ಸೇವೆ ಎಂದಾಗುತ್ತದೆ. ಆ ದುಡಿಮೆ 'ಕಾಯಕ' ಎನಿಸಿಕೊಳ್ಳುತ್ತದೆ. 'ಕಾಯಕ'ವೆಂದರೆ ಕೇವಲ ಭೋಗಕ್ಕಾಗಿ ಮಾತ್ರ ಆಗಬಾರದು; ಯೋಗಕ್ಕಾಗಿ ನಡೆಯಬೇಕು. ಭೋಗ ಇಳೆಯ ಬದುಕಿನ ಲೌಕಿಕ ಆಕಾಂಕ್ಷೆಗಳಲ್ಲಿ ಸಂದು ಹೋಗುವ ಆಚಾರವಾಗುತ್ತದೆ. ಅಷ್ಟಕ್ಕೆ ನಿಂತರೆ ಪರಾರ್ಥ, ಪರಹಿತದ ಭಾವವೆ ಉದ್ಭವವಾಗದು. ಹೀಗಾಗಿ ಬದುಕು ಯೋಗಕ್ಕಾಗಿ ಎಂದುಕೊಂಡಾಗ ಕಾಯಕಕ್ಕೆ ಕಳೆ ಒದಗುತ್ತದೆ. ಅಂಥ ದುಡಿಮೆಯಲ್ಲಿ ಕಳಾಚೈತನ್ಯವಿರುತ್ತದೆ. 'ವೃತ್ತಿಶ್ಚೈತನ್ಯ ಸ್ವರೂಪಿಣೀ' ಎಂಬುದರ ಅರ್ಥವೇ ಇದು. ಇಂಥ ಕಾಯಕದಲ್ಲಿ ನಿರತರಾದಾಗ ಹರಿಯಬೇಕು, ಅಮರೇಶ್ವರಲಿಂಗವಾದರೂ ಕಾಯಕದೊಳಗು', ಎಂದು ಮಾರಯ್ಯ ಹೇಳುವ ಮಾತನ್ನು ಹೇಗೇ ಅರ್ಥೈಸಬೇಕು! ಆದರೆ ದಾಸೋಹದಲ್ಲಿ ಕಾಯಕದ ಪಾತ್ರವಿದೆಯಲ್ಲ! ಅಂತಾಗಿ ವಿವೇಚಿಸಬೇಕು.

ಗುರುದರ್ಶನವಾಗಲಿ, ಲಿಂಗಪೂಜೆಯಾಗಲಿ ಜಂಗಮದೊಡನೆ ನಿರತವಾಗುವುದಾಗಲಿ ಕಾಯಕದ ವಿವಿಧ ರೂಪಗಳೇ ಆಗಿವೆ. ಒಂದು ದೃಷ್ಟಿಕಾಯಕ, ಇನ್ನೊಂದು ಧ್ಯಾನಕಾಯಕ, ಮಗದೊಂದು ಸಂಗಮಿಸುವ ಕೂಡಲಸಂಗಮವಾಗುವ ಕಾಯಕ : ಹೀಗಾಗಿ ಕಾಯಕದಲ್ಲಿ ನಿರತವಾದಾಗ ಅಂದರೆ, ನೋಟ, ಚಿಂತನೆ ಭಾವ ಎಲ್ಲವು ತನ್ಮಯವಾಗಿ ನಡೆಸುವುದೇ ಚೈತನ್ಯದ ಬೆಡಗು. ಶುದ್ಧದಾಸೋಹ ಈ ಪರಿಯದು. ಅನ್ಯಥಾ ಭಾವವಿಲ್ಲದ ಸ್ವ-ತನುವಿನ ಬಗ್ಗೆ ಮರುಗದ ಕೊರಗದ ಜಗದ ಶ್ರೇಯದೃಷ್ಟಿಯಿಂದಲೇ ಅರ್ಪಿಸಿಕೊಳ್ಳುವುದು; ಕಾಯಕದಲ್ಲಿ

**ಶ್ರೀವಾಣಿ**

*ಸ್ವಾತಂತ್ರ್ಯ ಬಂದನಂತರ ಭ್ರಷ್ಟಾಚಾರವೇ ಜೀವನವಿಧಾನವಾದದ್ದು ದೇಶದ ದೊಡ್ಡದುರಂತ. ಉನ್ನತ ಜೀವನ ಮೌಲ್ಯಗಳೆಲ್ಲ ಇಂದು ಕಣ್ಮರೆಯಾಗಿವೆ. ಪ್ರಾಮಾಣಿಕತೆ, ಸರಳ ಜೀವನ, ಆಧ್ಯಾತ್ಮಿಕ ಚಿಂತನೆಗಳು ವಿರಳವಾಗಿವೆ. ಮುಖಂಡರು ದಾಹತ್ರಯಗಳ – ಹಣ, ಅಧಿಕಾರ, ಭೋಗ ಬೆನ್ನುಹತ್ತಿದ್ದಾರೆ. ಸಜ್ಜನರು ತೆರೆಮರೆಗೆ ಸರಿಯುವಂತಾಗಿದೆ.*





ಶ್ರೀಮಠದಲ್ಲಿ ದಾಸೋಹ – ಒಂದು ನೋಟ

**ಶ್ರೀ ಕ್ಷೇತ್ರದಲ್ಲಿ ಒಂದು ದಿನದ ದಾಸೋಹಕ್ಕೆ ತಗಲುವ ಅಂದಾಜು ಖರ್ಚಿನ ವಿವರಗಳು**

೮೦೦೦ ವಿದ್ಯಾರ್ಥಿಗಳ ಎರಡು ಹೊತ್ತಿನ ಊಟ, ಮಧ್ಯಾಹ್ನದ ಉಪಹಾರ ಮತ್ತು ಪ್ರತಿದಿನ ಬರುವ ಭಕ್ತರಿಗೆ (ಹಬ್ಬ-ಹರಿದಿನಗಳನ್ನು ಬಿಟ್ಟು)

| | | | |
|---|---|---|---|
| ಅಕ್ಕಿ | ೩೦ ಕ್ವಿಂಟಾಲ್ | ಸಾಂಬಾರುಪುಡಿ } | ೦೧ ಕ್ವಿಂಟಾಲ್ |
| ರಾಗಿಹಿಟ್ಟು | ೧೫ ಕ್ವಿಂಟಾಲ್ | ಖಾರದಪುಡಿ } | |
| ತೊಗರಿಬೇಳೆ | ೦೩ ಕ್ವಿಂಟಾಲ್ | ತೆಂಗಿನಕಾಯಿ | ೨೦೦ |
| ತರಕಾರಿ | ೦೪ ಕ್ವಿಂಟಾಲ್ | ಹುಣಸೇಹಣ್ಣು | ೬ ಕೆಜಿ |
| ಈರುಳ್ಳಿ | ೦೩ ಕ್ವಿಂಟಾಲ್ | ಹಾಲು (ಮಜ್ಜಿಗೆಗೆ) | ೩೦೦ ಲೀಟರ್ |
| ರವೆ (ಉಪ್ಪಿಟ್ಟಿಗೆ) | ೦೫ ಕ್ವಿಂಟಾಲ್ | ಮೆಣಸಿನಕಾಯಿ | ೨೫ ಕೆಜಿ |
| ಉಪ್ಪು | ೦೧ ಕ್ವಿಂಟಾಲ್ | ಕಡಲೆಕಾಯಿ ಎಣ್ಣೆ | ೧೦೦ ಕೆಜಿ |

ಐಕ್ಯಸ್ಥಿತಿಗೊಳ್ಳುವುದು. ಹೀಗಾದಾಗ ಗುರಿ ಎಲ್ಲ, ಲಿಂಗ ಕಾಯಕವೇ ಆಗಿರುತ್ತದೆ. ಆಗ ಲಿಂಗಕ್ಕೂ ಮಾಡುವ ಶಿವಕಾಯಕಕ್ಕೂ, ಗುರುವಿಗೂ ನೋಡುವ ಕಾಯಕ ಕಾಂತಿಗೂ, ಜಂಗಮಕ್ಕೂ, ಸಂಗವಾಡುವ ನಿಸ್ಸಂಗ ಕಾಯಕಕ್ಕೂ ಬೇರೆ ಬೇರೆ ಎಂಬ ನಿಲವೇ ನಿಲ್ಲುವುದಿಲ್ಲ. ಅಂತಾಗಿ ಮಾಡುವ ಕಾಯಕದಲ್ಲಿ ತಲ್ಲೀನವಾಗಿದ್ದರೆ ಅಲ್ಲಿಯೇ ಗುರುಲಿಂಗ ಜಂಗಮ ಸಾನ್ನಿಧ್ಯವಾಗಿಬಿಡುತ್ತದೆ. ಆಗ ಮರೆಯುವ; ಹಂಗು ಹರಿಯುವ ಮಾತೇ ಇಲ್ಲ. ವ್ಯಾಖ್ಯಾನಿಸಿಕೊಳ್ಳಬೇಕಾದ ಬಗೆ ಅದು. ಆಯ್ದಕ್ಕಿ ಮಾರಯ್ಯ 'ಗುರುಲಿಂಗ ಜಂಗಮದಲ್ಲಿ ಬೆರಸಿ ದಾಸೋಹವ ಮಾಡುವಲ್ಲಿ ಹೊನ್ನು ಹೆಣ್ಣು ಮಣ್ಣು ಮರೆಯಬೇಕು' ಎಂದು ಹೇಳುವಾಗ ತ್ರಿವಿಧ ದಾಸೋಹವ ಆಚರಿಸುವಾಗ ಹಣದಾಸೆ, ಸತಿಸಂಗದಾಸೆ, ನೆಲದ ಲಾಭದ ಬಗ್ಗೆ ಮೋಹವಿಟ್ಟುಕೊಂಡರೆ ಕಾಯಕ ಅನುಭಾವವಾಗುವುದಿಲ್ಲ; ದಾಸೋಹ ದರ್ಶನವಾಗುವುದಿಲ್ಲ ಎಂಬ ವ್ಯಾಖ್ಯಾನಕ್ಕೆಡೆ ಇದೆ. 'ಮಾಟ ಸ್ವಸ್ಥವಾದರೆ' ಎನ್ನುವಾಗ ನಮ್ಮ ಚಿಂತನೆಯ ಹೊಳಹುಗಳು ಲಿಂಗದ ನೆನಹಿನಲ್ಲಿದ್ದಾಗ ಅಂಗಲಿಂಗೈಸಿದಾಗ ಇವೆಲ್ಲ ಕೂಡಿಬರುತ್ತವೆ ಎಂದಾಗುತ್ತದೆ. ಆಯ್ದಕ್ಕಿ ಲಕ್ಕಮ್ಮ, ಆಯ್ದ ಅಕ್ಕಿಯನ್ನು ಮಾರಯ್ಯ ಹೆಚ್ಚು ತಂದಾಗ ಮೋಹದ ಮಾಟಕ್ಕೆ ತನ್ನ ಗಂಡ ಸಿಗಬಾರದೆಂದು ಹೆಚ್ಚಿನ ಅಕ್ಕಿಯನ್ನು ಹಿಂದಕ್ಕೆ ಸುರಿದು ಬಾ ಎನ್ನುತ್ತಾಳೆ. ಇದು ಕಾಯಕದಲ್ಲಿರಬೇಕಾದ ನಿರ್‌ವ್ಯಾಮೋಹ, ನಿರ್ಲಿಪ್ತತೆಯ ಬೆಡಗು. ಸತಿಯ ವಾಕ್ಕುವಿಗದ ಸಂದ ಪುರುಷ ಮರ್ಯಾದೆ. ಮರ್ಯಾದೆ ಭಂಗವಾಗಿದ್ದರೆ ಅದು ದಾಸೋಹದ ಯೋಗಕ್ಕೆ ಸಲ್ಲದೇ ಹೋಗಿಬಿಡುತ್ತಿತ್ತು. ಈ ದರ್ಶನ ಸಾಧಿಸಿದ್ದ ಲಕ್ಕಮ್ಮ ಅಂತೇ ಪ್ರಶ್ನಿಸುತ್ತಾಳೆ; ಛೇಡಿಸುತ್ತಾಳೆ : 'ಭಕ್ತರು ಕಾಯಕವೆಂದು ದಾಯಗಾಜಿಕೆಯಲ್ಲಿ ತಂದು ದಾಸೋಹವ ಮಾಡಬಹುದೇ?' ಎಂದು.

ದಾಸೋಹ, ಕಾಯಕ ಹೇಗೆ ಕೇವಲ ಭೋಗನಿಷ್ಠವಾಗದೆ ಯೋಗನಿಷ್ಠವಾಗಬೇಕು ಎಂಬುದರ ಹಿತವಾದ ಶ್ರೇಯಪರವಾದ ನುಡಿ ಇಲ್ಲಿ ಅರ್ಥವನ್ನು ವರ್ಷಿಸಿದೆ. ಎಲ್ಲೋ ಒಕ್ಕಲುಕಣದಲ್ಲಿ ಬೆಳೆದವರಿಂದ ಕಾಳುಗಳ ಭಿಕ್ಷೆ ಬೇಡಿ ತಂದು ದಾಸೋಹ ಮಾಡಿದರೆ ಸಲ್ಲುವುದು ಯೋಗವಲ್ಲ.

**ಶ್ರೀವಾಣಿ**

*ನಾವು ಮಾಡಿರುವ ಸಾಧನೆ ಅತ್ಯಂತ ಕಿರಿದು, ಮಾಡಬೇಕಾದುದು ಅತ್ಯಂತ ಹಿರಿದು. ಇದರ ಅರಿವೆ ಬದುಕು.*

## ಮಹಾದಾಸೋಹ ನಿಧಿ ಯೋಜನೆ

ಇಡೀ ವಿಶ್ವದಲ್ಲಿಯೇ ಏಕೈಕ ವಿರಳ ಮಹಾದಾಸೋಹ ಶ್ರೀಮಠದ ಮಹತ್ವಪೂರ್ಣ ಸೇವೆ. ಈ ಸೇವೆ ಅವಿಚ್ಛಿನ್ನವಾಗಿ ನಡೆದು ಬರಲು ಶ್ರೀಮಠದ ಹಳೆಯ ವಿದ್ಯಾರ್ಥಿಗಳು "ಮಹಾದಾಸೋಹ ನಿಧಿ' ಯೋಜನೆಯನ್ನು ರೂಪಿಸಿದ್ದಾರೆ. ಯೋಜನೆ ಹೀಗಿದೆ. ೨೧೦೧ ರೂ.ಗಳಿಗೆ ಕಡಿಮೆ ಇಲ್ಲದಂತೆ ಕಾಣಿಕೆ ನೀಡುವುದರ ಮೂಲಕ ದಾಸೋಹ ಸೇವೆಯ ಸದಸ್ಯರಾಗಬಹುದು. ನೀಡಿದ ಕಾಣಿಕೆಯನ್ನು ನಿಶ್ಚಿತ ಠೇವಣಿ ರೂಪದಲ್ಲಿ ಬ್ಯಾಂಕಿನಲ್ಲಿಟ್ಟು, ಅದರಿಂದ ಬರುವ ಬಡ್ಡಿ ಹಣದಿಂದ ಒಂದು ದಿನ ಯಥೋಚಿತವಾಗಿ, ಕಾಣಿಕೆ ನೀಡಿದ ಸದಸ್ಯರು ಸೂಚಿಸಿದವರ ಸ್ಮರಣಾರ್ಥ ದಾಸೋಹ ಕೈಂಕರ್ಯವನ್ನು ಮಾಡಲಾಗುತ್ತದೆ. ತಾವು ಈ ಅವಕಾಶವನ್ನು ಸದುಪಯೋಗಮಾಡಿಕೊಳ್ಳುವುದರ ಮೂಲಕ "ಮಹಾದಾಸೋಹ' ನಿತ್ಯೋತ್ಸವವಾಗುವಂತೆ ಸಹಕರಿಸ ಬೇಕಾಗಿ ಪ್ರಾರ್ಥನೆ.

ಒಕ್ಕಲು ಕಣದಲ್ಲಿ ದುಡಿದು ತಂದರೆ ಅದು ಕಾಯಕ ಯೋಗ. ಕಾರಣ ದುಡಿಮೆಯ ಬೆಲೆ ಅರಿವಾಗುತ್ತದೆ. ಹಾಗೆ ತಂದದ್ದು ಪ್ರಸಾದಕ್ಕೆ ಯೋಗ್ಯವಾಗುತ್ತದೆ. 'ಪ್ರಸಾದ' ಎನ್ನುವಾಗಲೇ, ಶೀಲದ, ಶುಭದ, ಪಾವಿತ್ರ್ಯದ ಬೆರಸು ಒದಗುತ್ತದೆ. ಅದೊಂದು ಸಾವಯವ ಬೆರಸು. ದೇಹ, ತನಗೆ ಒಗ್ಗದ್ದನ್ನೂ ಒಗೆಯುವಂತಹ ವೈಜ್ಞಾನಿಕ ಚರ್ಯೆ ಅದು. ಅದಾಗಿ ಎಷ್ಟು ಬೇಕೋ ಅಷ್ಟು ಮಾತ್ರ ಸಲಿಸಿಕೊಳ್ಳುವುದು. ಅಲ್ಲಿ ದುರಾಸೆ ಇರುವುದಿಲ್ಲ. ಪರರಿಗೂ ಆಗಲಿ ಎಂಬ ನೆರವಿನಾಸೆ ಇರುತ್ತದೆ. ಇನ್ನೊಬ್ಬರ ಅನ್ನಕ್ಕೆ ಕೈಯಿಡುವ ಕಬಳಿಕೆ ಅಲ್ಲಿ ಇರುವುದಿಲ್ಲ. ಇದು ದಾಸೋಹದ ಶ್ರೀಯೋಗ-ಸಿರಿಯೋಗ. ದುರಾಸೆಗಳನ್ನು ಅತಿಯಾಸೆಗಳನ್ನು ದಮನಮಾಡಿ, ಸ್ವಾರ್ಥದ ಬಲೆಯಿಂದ ಮೇಲೆದ್ದು, ದಾಸನಾಗಿ ಅರ್ಥಾತ್ ದುರ್ ಅಹಂಕಾರ ತವಿದುಕೊಂಡು ಮಾಡುವ ವಿನಮ್ರಸೇವೆ. ಅಂತೇ ಅದೊಂದು ಲಿಂಗಯೋಗ. 'ಯತ್ರ ಜೀವ ತತ್ರ ಶಿವ' ಆಗುವುದು ಆಗಲೇ. ಜೀವನೇ ಶಿವನಾಗುವ, ಲೌಕಿಕ ಕಾಯಕ, ಪಾರಮಾರ್ಥಿಕ ಕಾಯಕದ ನಡುವಣ ವ್ಯತ್ಯಾಸವನ್ನು ದಾಸೋಹ ಯೋಗ ತೋರಿಸುವ ಬಗೆ ಇದು. ಲೌಕಿಕ ಕಾಯಕದಲ್ಲಿ ಖ್ಯಾತಿಯ ಲಾಭಕ್ಕೆ ಪರಿತಪಿಸುವುದಿರುತ್ತದೆ. ಪಾರಮಾರ್ಥಿಕ ಕಾಯಕವೆನಿಸುವ ದಾಸೋಹವು 'ಖ್ಯಾತಿಲಾಭಕ್ಕೆ ಮಾಡುವಾತ ಭಕ್ತನಲ್ಲ' ಎಂದು ಎಚ್ಚರಿಸುತ್ತದೆ. ಯೋಗದ ಭಾಗ್ಯವೆ ಶ್ರೇಯ ತರುವುದು. ದಾಸೋಹ ಯೋಗವು ಹಾಗೆ ಶ್ರೇಯ ತರುವುದಿದ್ದರಿಂದಲೇ ಶರಣರ ದೃಷ್ಟಿ ಅದನ್ನು ತನ್ನೊಳಗಾಗಿಸಿಕೊಂಡಿತು.

ಈ ಹಿನ್ನೆಲೆಗಳಲ್ಲಿ ವಿಕಸಿತ ಕ್ಷೇತ್ರವಾದ ಸಿದ್ಧಗಂಗಾ ಕ್ಷೇತ್ರವು ದಾಸೋಹ ಕ್ಷೇತ್ರವೆಂದೇ ಪ್ರಸಿದ್ಧಿಗೊಳಿಸಿದೆ. ತನ್ನ ಗುರು ಪರಂಪರೆಯಲ್ಲಿ ಬಂದಂತೆ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ನೂರು ವರುಷದ ಬದುಕಿನತ್ತ ಸಾಗುತ್ತಲೇ ಜ್ಞಾನದಾಸೋಹ, ಕ್ರಿಯಾದಾಸೋಹ, ಸಾಂಸ್ಕೃತಿಕ ದಾಸೋಹಗಳಲ್ಲಿ ತನ್ಮಯವಾಗಿ ಬಿಟ್ಟಿದ್ದಾರೆ. ಅದರಿಂದ ನಾಡಿನ ಎಲ್ಲೆಲ್ಲಿಯೋ ಹುಟ್ಟಿದ ಜೀವಗಳು, ಈ ದಾಸೋಹ ಭಾಗ್ಯಕ್ಕೆ ಒಳಗಾಗಿ ಬದುಕನ್ನು ನೇರ್ಪುಮಾಡಿಕೊಂಡಿವೆ. ಇದೊಂದು ನಿರಂತರ ನಡಿಗೆ. ಸಿದ್ಧಗಂಗಾಕ್ಷೇತ್ರದ ಹದುಳಸೇವೆಯ ನಡಿಗೆ. ಶಿವಸಾಕ್ಷಾತ್ಕಾರದ ಬೆಳಕಿನ ನಡಿಗೆ. ನಾಡಿನ ಹಿತಕ್ಕೆ ಮಹಾದೇಣಿಗೆ. ಈ ಕಾರಣಗಳಿಂದಾಗಿಯೇ ಆಡಿದರೆ, ಹಾಡಿದರೆ, ಓದಿದರೆ ತ್ರಿವಿಧದಾಸೋಹವನ್ನು ನಡೆಸುವ ಪರಿಯನ್ನೂ 'ತಿಳಿಸುವ ಭಕ್ತಿಯಕ್ಷೇತ್ರ'ವಾಗಿ ಸಿದ್ಧಗಂಗಾ ಕ್ಷೇತ್ರವು ಮಹತಿಯಿಂದ ಮಹತಿಗೆ ಬೃಹತ್ತಿನಿಂದ ಬೃಹತ್ತಿಗೆ ಇಂದೂ ವಿಕಸಿಸುತ್ತಿರುವ ದಿವ್ಯಕ್ಷೇತ್ರವಾಗಿದೆ.

*"ದಾಸೋಹ ಕೊಟ್ಟವರ ಸಿರಿಯ ಅನುಭೋಗವಲ್ಲ*
*ಆ ಸಿರಿಯ ಒಡಲಲ್ಲಿ ಖ್ಯಾತಿಗೋಡುವ ಹವ್ಯಾಸವಲ್ಲ*
*ತನುವ ತಕ್ಕೈಸಿ ಎದೆಯ ಬನಿಯನು ಮೆದುಳ ಮಂಥನಕೆ*
*ಮುಡುಪಿಟ್ಟ ಯೋಗ ಅನುಭೋಗ ಮೀರಿದ ಎತ್ತರಭಾಗ್ಯ.*
*ದಾಸೋಹ ಈಶನೊಳಾಡುವ ಐಕ್ಯದವರ್ಸರದ ಸಂಗವಾಗೆ*
*ಕೀರುತಿಗಳ ಕಳೆದ ಸಾರ್ಥಕವ ಹೊಮ್ಮಿಸುವ ಒಳಗಿನ ಬಗೆ*
*ಕಾಣಾ ಅಚಲದೇವನಾಗೊಡೆಯ*
*ದಾಸೋಹವೊಂದು ದರ್ಶನ ಯೋಗ"*

★

### ಶ್ರೀವಾಣಿ

*ಕಷ್ಟ ಬಂದಾಗಲೇ ವ್ಯಕ್ತಿತ್ವದ ವಿಕಾಸ. ಸುಖ ಬಂದರೆ ಸತ್ವ ಪರೀಕ್ಷೆಯಾಗದು. ಕಷ್ಟ ಬಂದಾಗ ಶಕ್ತಿ ಹೊಮ್ಮಿ, ವ್ಯಕ್ತಿತ್ವ ವಿಕಾಸವಾಗಲು ಪರಮಾತ್ಮ ಈ ವಾತಾವರಣವನ್ನು ಸೃಷ್ಟಿಮಾಡಿರಬೇಕು.*





## ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಕೆಲವು ನಿಮಿಷಗಳು

– ಕವಿತಾಕೃಷ್ಣ
ಸಾಹಿತಿಗಳು,
ಕ್ಯಾತಸಂದ್ರ, ತುಮಕೂರು.

ಜನಿಸಿದ್ದು ಶ್ರೀ ಸಾಮಾನ್ಯರಾಗಿ, ಬಾಳಿದ್ದು ಅಸಾಮಾನ್ಯರಾಗಿ, ಏರಿದ್ದು ಉನ್ನತ ಸ್ತರ. ನುಡಿದದ್ದು ಆರ್ಷವಾಣಿಯ ಬೆಳಕಲ್ಲಿ. ಸಾಧನೆ ಮಾಡಿದ್ದು ವರ ಸಿದ್ಧಗಂಗೆಯ ಶ್ರೀ ಸಾನ್ನಿಧ್ಯದಲ್ಲಿ. ವರವ ಕರುಣಿಸಿದ್ದು ದಿವ್ಯ ಗುರುವಾಗಿ, ಬೆಳೆದದ್ದು ಕವಿದ ಕಗ್ಗತ್ತಲ ನೀಗುವ ಭವ್ಯ ಬೆಳಕಾಗಿ. ಧರಿಸಿದ್ದು ಕಾವಿ, ಮಾಡಿದ್ದು ಮಹಾನ್ ಕಾಯಕ. ನಡೆಸಿದ್ದು ಲೋಕೋದ್ಧಾರದ ವ್ಯಾಪಾರ. ನೀಡಿದ್ದು ಹಸಿದೊಡಲಿಗೆ ಅನ್ನ, ಮತಿಗೆ ಮಂಗಳ ಜ್ಞಾನ, ಮುಗಿಲಲ್ಲಿ ಹಾರಿಸಿದ್ದು ಕಾವಿಯ ಪತಾಕೆ, ಮೊಳಗಿಸಿದ್ದು ಓಂಕಾರದ ದಿವ್ಯಮಂತ್ರ, ದೀನದಲಿತರ ಪಾಲಿನ ಕಾಮಧೇನುವಾಗಿ, ಆಧ್ಯಾತ್ಮ ಬನದ ಕಲ್ಪವೃಕ್ಷವಾಗಿ, ನೊಂದು ಬೆಂದವರ ಪಾಲಿನ ಭವರೋಗ ನೀಗುವ ವೈದ್ಯರಾಗಿ, ಹಿಮದ ಗಡಿಯಿಂದ ಕಡಲ ತಡಿಯವರೆಗೆ ತನ್ನ ಧವಳ ಕೀರ್ತಿಯನ್ನು ತಂಗಾಳಿಯಂತೆ ಪಸರಿಸುತ್ತಾ, ಭಾರತೀಯ ಋಷಿ ಜೀವನದ ಭವ್ಯಗೋಪುರಕೆ ಹೊಂಗಳಸವಿಟ್ಟ ಮಹಾನ್ ವಿಭೂತಿ ಪುರುಷರು ಶ್ರೀ ಸಿದ್ಧಗಂಗೆಯ ಸಿದ್ಧಿಪುರುಷ ಪರಮಪೂಜ್ಯ, ತ್ರಿವಿಧ ದಾಸೋಹಮೂರ್ತಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳರೊಡನೆ ನಡೆಸಿದ ಸಂದರ್ಶನ.

ಪ್ರಶ್ನೆ : ಭಾರತೀಯರ ಹಿರಿಮೆ ಏನು?

ಪೂಜ್ಯರು : ಜಗತ್ತಿಗೆ ಬೆಳಕನ್ನು, ಜ್ಞಾನವನ್ನೂ ಮೊದಲಿಗೆ ನೀಡಿದವರು ಭಾರತೀಯರು. ಅದೇ ಅವರ ಹಿರಿಮೆ.

ಪ್ರಶ್ನೆ : ನಮ್ಮ ಜನ ನಮ್ಮ ಧರ್ಮದ ಬಗ್ಗೆ ತಿರಸ್ಕಾರ ತಾಳಲು ಕಾರಣ?

ಪೂಜ್ಯರು : ನಮ್ಮ ಜನ ಪಾಶ್ಚಾತ್ಯ ಸಂಸ್ಕೃತಿಯಿಂದ ಪ್ರಭಾವಿತರಾಗಿರುವುದೇ ಕಾರಣ.

ಪ್ರಶ್ನೆ : ಧರ್ಮವೇ ಭರತಖಂಡವನ್ನು ನೀರಸಗೊಳಿಸಿತು ಎಂಬುದು ಕೆಲವರ ಅಂಬೋಣ. ಈ ಬಗ್ಗೆ ತಮ್ಮ ಅಭಿಪ್ರಾಯವೇನು?

ಪೂಜ್ಯರು : ಇದು ಅಜ್ಞಾನದ ಪರಮಾವಧಿ ಮಾತಾಯಿತು. ಅಹಂ ಬ್ರಹ್ಮಾಸ್ಮಿ, ತತ್ವಮಸಿ ಎಂದು ಯಾರು ಹೇಳಬಲ್ಲರು? ನೀನು ಸಾಮಾನ್ಯನಲ್ಲ ನೀನು ಬ್ರಹ್ಮ ದೇವರಾಗಿರುವೆ ಎಂಬ ಧೀರ ಘೋಷಣೆಯನ್ನು ಜಗತ್ತಿನಲ್ಲಿ ಇನ್ನಾರು ಮಾಡಬಲ್ಲರು? ಸಾವಿರಾರು ವರ್ಷಗಳಿಂದ ಈ ಮಾತನ್ನು ಪದೇ ಪದೇ ಕೇಳುತ್ತಾ ಬಂದವರು, ಇಂದು ಅತಿ ಕೆಳಮಟ್ಟಕ್ಕೆ ಇಳಿದಿದ್ದೇವೆ. ಧರ್ಮದ ಬಗ್ಗೆ ತಿರಸ್ಕಾರಭಾವನೆ ತಾಳಿರುವುದೇ ನಮ್ಮ ಪತನಕ್ಕೆ ಕಾರಣ.

ಪ್ರಶ್ನೆ : ನಮ್ಮಲ್ಲಿರುವ ನಾನಾ ಸಂಪ್ರದಾಯ, ಮತ, ಪಂಥಗಳು ನಮ್ಮ ಸಮಾಜದ ಐಕ್ಯ ಮತ್ತು ಶಕ್ತಿಗಳನ್ನು ಕುಂಠಿಸುತ್ತದೆ ಎಂಬ ಅಪವಾದವನ್ನು ಕೆಲವರು ಹೊರಿಸುವರಲ್ಲಾ?

ಪೂಜ್ಯರು : ಹೀಗೆ ಪ್ರಶ್ನಿಸುವವರಿಗೆ ಹಿಂದೂಧರ್ಮದ ವಿಶಾಲದೃಷ್ಟಿಯ ತಿಳಿವಳಿಕೆ ಇಲ್ಲ. ನಮ್ಮ ಧರ್ಮದಷ್ಟು ವಿಶಾಲವಾದ ಧರ್ಮ ಜಗತ್ತಿನಲ್ಲಿ ಬೇರೊಂದಿಲ್ಲ. ಸಂಪ್ರದಾಯಗಳು, ಮತ, ಪಂಥಗಳು ಅದೆಷ್ಟೇ ಇರಲಿ ಅವೆಲ್ಲವೂ ವಿಶಾಲವಾದ ಹಿಂದೂ ಸಮಾಜದ ಶಾಖೆಗಳು.

### ಶ್ರೀವಾಣಿ

*ರಾಷ್ಟ್ರದಲ್ಲಿಂದು ಆರ್ಥಿಕವಾಗಿ ಬಡತನವಿರಬಹುದು. ಅದನ್ನು ಶ್ರಮ ದುಡಿಮೆಯಿಂದ ಅಭಿವೃದ್ಧಿಪಡಿಸಿಕೊಳ್ಳಬಹುದು. ಆದರೆ ಹೃದಯ ದಾರಿದ್ರ್ಯವಿರಬಾರದು. ದೊಡ್ಡಸ್ಥಾನಗಳಲ್ಲಿರುವವರು ದೊಡ್ಡ ದೃಷ್ಟಿಯುಳ್ಳವರಾಗಬೇಕು. ಉದಾತ್ತ ಚಿಂತಕ ರಾಗಬೇಕು. ಅಧಿಕಾರ, ಅಂತಸ್ತು, ಅವಕಾಶಗಳು ಬಂದಾಗ ಹಿರಿಯ ಮಾರ್ಗಾವಲಂಬಿಗಳಾಗಿ ಮುನ್ನಡೆಯಬೇಕು.*

ಮಾತ್ರ ಸಮಾಜಕ್ಕೆ ಪೂರಕವಾಗಿ, ಪೋಷಕವಾಗಿ ಕಾಣಿಕೆ ನೀಡುವಂತೆ ಇರಬೇಕು. ಈ ಭಾವನೆ ನಮ್ಮಲ್ಲಿ ಪ್ರಧಾನವಾಗಿರಬೇಕು. ತಾನೇ ಶ್ರೇಷ್ಠ ಎಂಬ ಭಾವನೆ ಬಂದರೆ ಅದು ಸಮಾಜಕ್ಕೆ ಅಪಾಯಕಾರಿ. ನಿಶ್ಚಿತವಾಗಿ ಹಾನಿಕಾರಕ. ಹಿಂದೂ ಧರ್ಮವೇ ಈ ಪಂಥ ಸಂಪ್ರದಾಯಗಳಿಗೆ ಅವಕಾಶ ನೀಡಿದೆ. ಅದೇ ಅದರ ಮಹತ್ವ, ತಮ್ಮ ಪ್ರವಾದಿ ಹೇಳಿದ್ದೇ ಸತ್ಯವೆಂದು ಹೇಳುವ ಇತರರೂ ಈ ರೀತಿ ಹೇಳಬೇಕೆಂದು ಒತ್ತಾಯಿಸುವ ಅಪರಾಧವನ್ನು ಹಿಂದೂ ಧರ್ಮ ಮಾಡಿಲ್ಲ.

ಪ್ರಶ್ನೆ : ಸ್ವಾತಂತ್ರ್ಯ ಫಲ ಅರ್ಥವತ್ತಾಗಬೇಕಾದರೆ ಏನು ಮಾಡಬೇಕು?

ಪೂಜ್ಯರು : ಮಹಾತ್ಮಾಜಿಯವರ ಸಂದೇಶದಂತೆ ಸ್ವಾತಂತ್ರ್ಯ ಅರ್ಥವತ್ತಾಗಬೇಕು. ಪ್ರತಿಯೊಂದು ವ್ಯಕ್ತಿಗೂ ಕೂಡ ಮೊದಲು ಎರಡು ವೇಳೆ ಸಮೃದ್ಧಿಯಾದ ಊಟ ದೊರೆಯಬೇಕು.

ಪ್ರಶ್ನೆ : ಮಹಾತ್ಮಗಾಂಧೀಜಿಯವರ ಬಗ್ಗೆ ನಿಮ್ಮ ಅನಿಸಿಕೆ ಏನು?

ಪೂಜ್ಯರು : ಆತ ದೈವೀವರ್ಗದ ಮಾನವ. ಈ ಪುಣ್ಯ ಪುರುಷನನ್ನು ನಾವು ಕೇವಲ ಭಾರತೀಯ ಎಂದು ಭಾವಿಸಿದರೆ ತಪ್ಪಾಗುತ್ತದೆ. ಗಾಂಧೀಜಿ ನಿಜಕ್ಕೂ ಮಹಾತ್ಮ. ಇಡೀ ವಿಶ್ವವನ್ನೇ ಒಂದು ಕುಟುಂಬವಾಗಿ ಕಂಡ ವಿಶ್ವಪ್ರೇಮಿ. ವಿಶ್ವಕುಟುಂಬಿ ಹಾಗೂ ಮಹಾ ಮಾನವತಾ ವಾದಿ. ಸರ್ವ ಸಮತಾವಾದಿ ಎಂದು ಭಾವಿಸುವುದು ಅತ್ಯಂತ ಸೂಕ್ತವಾದುದು.

ಪ್ರಶ್ನೆ : ನಮ್ಮ ರಾಜಕಾರಣಿಗಳು ಸರ್ವಾಧಿಕಾರಿಗಳಾಗುತ್ತಿದ್ದಾರೆ. ಸರ್ವಾಧಿಕಾರವು ಅಷ್ಟು ಪ್ರಬಲವೇ?

ಪೂಜ್ಯರು : ಇದಕ್ಕೆ ನೆಪೋಲಿಯನ್ ಜೀವನ ಉತ್ತಮ ಉದಾಹರಣೆ. ಅಸಾಧ್ಯ ಎಂಬುದು ನನ್ನ ಶಬ್ದಕೋಶದಲ್ಲಿ ಇಲ್ಲ ಎಂದ. ಜಯದ ಮೇಲೆ ಜಯ, ಗೆಲುವಿನ ಮೇಲೆ ಗೆಲವು ಆಯಿತು ನಿಜ. ಕ್ರಮೇಣ ಅದೃಷ್ಟ ಬದಲಾಯಿತು. ಸೋಲಿನ ಮೇಲೆ ಸೋಲುಂಟಾಯಿತು. ಆತನೇ ಅಂತ್ಯದಲ್ಲಿ ಹೇಳಿದ ಬಲದ ಆಧಾರದ ಮೇಲೆ, ಸರ್ವಾಧಿಕಾರಿ ಕತ್ತಿಯ ಮೊನೆಯಲ್ಲಿ ಕಟ್ಟಿದ ಸಾಮ್ರಾಜ್ಯಗಳು ಉರುಳಿದವು. ಕ್ರಿಸ್ತನು ಪ್ರೀತಿಯ ಮೇಲೆ ಕಟ್ಟಿದ ಭಗವಂತನ ಸಾಮ್ರಾಜ್ಯ ಸಾವಿರಾರೂ ವರ್ಷಗಳು ಕಳೆದರೂ ಇಂದು ಉಳಿದಿದೆ. ಕ್ರಿಸ್ತನಿಗಾಗಿ ಸಾಯಲು ಲೆಕ್ಕವಿಲ್ಲದಷ್ಟು ಮಂದಿ ಸಿದ್ಧರಿದ್ದಾರೆ. ಇದು ಮಾನವ ಶಕ್ತಿಯ ಮೇಲೆ ಸಾಮ್ರಾಜ್ಯವನ್ನು ಕಟ್ಟಿದ ಸರ್ವಾಧಿಕಾರಿಯೊಬ್ಬನ ಮಾತು.

ಪ್ರಶ್ನೆ : ಮಾನವ ಜನಾಂಗಕ್ಕೆ ತಾವು ನೀಡುವ ಸಂದೇಶವೇನು?

ಪೂಜ್ಯರು : ನೂರು ವರ್ಷಗಳ ಕಾಲ ವ್ಯರ್ಥವಾಗಿ ಬಾಳುವುದಕ್ಕಿಂತ, ಮೂರುವರ್ಷ ಲೇಸೆನಿಸಿಕೊಂಡು ಬಾಳುವ ಇಚ್ಛೆ ಮಾನವ ಜನಾಂಗದ್ದಾಗಿರಬೇಕು.

ಪ್ರಶ್ನೆ : ತಾವು ವ್ಯವಸಾಯಕ್ಕೆ ಮಹತ್ವ ನೀಡುವಿರಿ. ಕಾರಣವೇನು?

ಪೂಜ್ಯರು : ವ್ಯವಸಾಯವೆಂಬುದು ಪವಿತ್ರ ವೃತ್ತಿ. ಅನ್ನಬ್ರಹ್ಮನ ಸೃಷ್ಟಿ ಮಾಡುವ ಅನುಪಮ ಉದ್ಯೋಗ.

ಪ್ರಶ್ನೆ : ಬಸವಣ್ಣ ತಮಗೆ ಮೆಚ್ಚುಗೆಯಾಗಲು ಕಾರಣ?

ಪೂಜ್ಯರು : ಸಂಪೂರ್ಣ ಮಾನವತೆಯನ್ನು ಭಗವಾನ್ ಬಸವಣ್ಣನವರಲ್ಲಿ ಕಾಣುತ್ತೇವೆ. ಅವರ ಕಾಯಕತತ್ವ ತುಂಬಾ ಮಹತ್ತರವಾದುದು. ದೇವರು ಒಲಿಯುವ ಮಾರ್ಗವನ್ನು ಅತ್ಯಂತ ಸರಳವಾಗಿ ತೋರಿಕೊಟ್ಟವರು. ಮಾನವರ ಉದ್ಧಾರಕ್ಕಾಗಿಯೆ ಬದುಕನ್ನು ಸವೆಸಿದವರು. ಜಾತಿಗಿಂತ ನೀತಿ ಮುಖ್ಯ ಎಂದು ಸಾರಿದವರು. ದೇವರು ದೊರಕುವ ಮಾರ್ಗಗಳನ್ನು ಅತ್ಯಂತ ಸರಳವಾಗಿ ತಿಳಿಯ ಹೇಳಿದವರು. ವಚನ ಸಾಹಿತ್ಯ ಚಳವಳಿಗೆ ಮಹತ್ವ ನೀಡಿದ ಮಹಾನುಭಾವರು. ಎಲ್ಲ ವರ್ಗದವರಿಂದಲೂ ಸಾಹಿತ್ಯ ಬರೆಸಿ, ಭಕ್ತಿಯ ಪ್ರವಾಹವನ್ನು ದೇಶದಲ್ಲಿ ಹರಿಯಬಿಟ್ಟವರು. ಮಡಿ-ಮೈಲಿಗೆ ಭೇದನೀಗಲು ಅಹರ್ನಿಶಿ ಶ್ರಮಿಸಿದವರು.

**ಶ್ರೀವಾಣಿ**

*ಕ್ರಮಬದ್ಧ ಜೀವನ ಪ್ರಗತಿಯ ಮೂಲ, ಅಕ್ರಮ ಜೀವನ ವಿನಾಶಕ್ಕೆ ಹಾದಿ. ಆದ್ದರಿಂದ ಎಲ್ಲಾ ವ್ಯವಹಾರ ಕ್ರಮದಿಂದ ಸಾಗುವ ವ್ಯವಸ್ಥೆಯಾದಾಗ ಜೀವನದಲ್ಲಿ ಸುಖ, ಶಾಂತಿ. ಹಾಗೆ ಮಾಡಲು ವ್ಯಕ್ತಿಯ ಪ್ರಯತ್ನ ಬಹಳ ಮುಖ್ಯ.*



ತುಳಿತಕ್ಕೆ ಒಳಗಾದವರನ್ನು ಮೇಲೆತ್ತಲು ಮಾಡಿದ ಸಾಹಸ ಅಸಾಮಾನ್ಯವಾದುದು. ಹೀಗಾಗಿ ಬಸವಣ್ಣ ಪರಮಪ್ರಿಯರಾಗಲು ಕಾರಣ.

ಪ್ರಶ್ನೆ : ತಾವು ನಮ್ಮ ರಾಜಕಾರಣಿಗಳಿಗೆ ನೀಡುವ ಸಂದೇಶವೇನು?

ಪೂಜ್ಯರು : ನುಡಿದಂತೆ ನಡೆಯಿರಿ. ಸ್ವಾತಂತ್ರ್ಯದ ಫಲ ಎಲ್ಲರಿಗೂ ಮುಟ್ಟಿಸಲು ನಿಮ್ಮ ಬದುಕು ಸವೆಸಿ. ಸನ್ಮಾರ್ಗದಲ್ಲಿ ನಡೆದು, ಧರ್ಮಭೀರುಗಳಾಗಿ ನಡೆಯಿರಿ.

ಪ್ರಶ್ನೆ : ಶ್ರೀ ಸಿದ್ಧಗಂಗಾ ಕ್ಷೇತ್ರ ತ್ರಿವಿಧ ದಾಸೋಹ ಕೇಂದ್ರವಾಗಿದೆ. ೯೭ ವಸಂತ ಕಂಡಿರುವ ತಮ್ಮ ಆಶಯವೇನು?

ಪೂಜ್ಯರು : ಶ್ರೀಕ್ಷೇತ್ರವು ಮಾನವತಾ ಮಂದಿರವಾಗಬೇಕೆಂಬುದು ನಮ್ಮ ಆಶಯವಾಗಿದೆ. ಹಂತ ಹಂತವಾಗಿ ಈ ಕಾರ್ಯ ಆಗುತ್ತಾ ಬಂದಿದೆ. ಅನ್ನ, ಜ್ಞಾನ ದಾಸೋಹ ನಮ್ಮ ಹಿರಿಯ ಶ್ರೀಗಳ ಕಾಲದಿಂದಲೂ ಅಕ್ಷಯವಾಗುತ್ತಾ ಬಂದಿದೆ. ಇಲ್ಲಿ ವಿದ್ಯಾರ್ಥಿಗಳು ಎಲ್ಲರೂ ಜೊತೆಗೂಡಿ ಓದುತ್ತಿದ್ದಾರೆ. ಜೊತೆಗೂಡಿ ಊಟ ಮಾಡುತ್ತಿದ್ದಾರೆ. ಜೊತೆಗೂಡಿ ಮಲಗುತ್ತಿದ್ದಾರೆ. ನಾಳೆ ಅವರು ಈ ರಾಷ್ಟ್ರದ ಏಳ್ಗೆಗೆ ಜೊತೆಗೂಡಿ ಸಾಗಬೇಕೆಂಬುದೆ ನಮ್ಮ ಆಶಯ.

ಪ್ರಶ್ನೆ : ನಮ್ಮ ಜನತೆಗೆ ನೀಡುವ ಸಂದೇಶವೇನು?

ಪೂಜ್ಯರು : ಮಾನವ ಜನ್ಮ ದೊಡ್ಡದೋ ಹುಚ್ಚಪ್ಪಗಳಿರ. ಇದನು ಹಾನಿ ಮಾಡಲು ಬೇಡಿ ಎಂದು ದಾಸರು, ಶರಣರು ಹೇಳಿದ್ದಾರೆ. ಮಾನವ ಜನ್ಮ ಅಮೂಲ್ಯವಾದುದು. ನಾವು ಹುಟ್ಟಿದ್ದಕ್ಕೆ ಮಾತಾಪಿತೃ ಋಣ, ಗುರು ಋಣ, ದೇವ ಋಣಗಳನ್ನು ಅಗತ್ಯವಾಗಿ ತೀರಿಸಬೇಕು. ಹುಟ್ಟಿ ಬಂದು ಋಣಪಾತಕರಾಗಿ ಹೋಗಬಾರದು. ಋಣ ತೀರಿಸುವ ಸಾತ್ವಿಕ ಫಲ ಸದಾ ನಮ್ಮಲ್ಲಿ ಜಾಗೃತವಾಗಿರಬೇಕು. ದಯವೇ ಧರ್ಮದ ತಳಹದಿಯಾಗಿ, ಕಾಯಕ ನಿಷ್ಠರಾಗಿ, ಮಾನವತಾವಾದಿಗಳಾಗಿ ಜನ ಬದುಕುವಂತಾಗಬೇಕು.

## ಮಾನವೀಯತೆಯ ಮಾತೃ ಮಂದಿರ

ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು – ಶ್ರೀ ಸಿದ್ಧಗಂಗಾ ಕ್ಷೇತ್ರ; ಈ ಎರಡೂ ಅವಿನಾಭಾವ ಬಾಂಧವ್ಯದಿಂದ ಕೂಡಿವೆ. ಶ್ರೀ ಶ್ರೀಗಳೆಂದರೆ ಶ್ರೀ ಕ್ಷೇತ್ರ ಶ್ರೀ ಕ್ಷೇತ್ರ ಎಂದರೆ ಶ್ರೀ ಶ್ರೀಗಳು ಎಂಬಂತಾಗಿದೆ. ಶ್ರೀ ಸಿದ್ಧಗಂಗಾ ಕ್ಷೇತ್ರವು ಕರ್ನಾಟಕದಲ್ಲಿ ಮಾತ್ರವಲ್ಲ, ರಾಷ್ಟ್ರಮಟ್ಟದಲ್ಲಿ ಪೂಜ್ಯ ಸ್ಥಾನವನ್ನು ಪಡೆದುಕೊಂಡಿದೆ. ತ್ರಿವಿಧದಾಸೋಹ ಕೇಂದ್ರ ಎಂಬ ಮಾತು ಇಲ್ಲಿ ಸಾಕಾರಗೊಂಡಿದೆ. ಬರುವ ಭಕ್ತರು ಯಾರೇ ಇರಲಿ, ಎಂತೇ ಇರಲಿ ಪ್ರವೇಶಕ್ಕೆ ಸಂದರ್ಶನಕ್ಕೆ; ಕಟ್ಟುಪಾಡುಗಳಿಲ್ಲ ಸರ್ವರಿಗೂ ಮುಕ್ತ ಅವಕಾಶ.

ಅನ್ನ ದಾಸೋಹ ಕೆಲವೆಡೆ ವೇಳೆಯನ್ನು ಅವಲಂಬಿಸಿದ್ದರೆ. ಇಲ್ಲಂತೂ ೨೪ ಗಂಟೆಗಳ ಕಾಲ ದಾಸೋಹ ನಡೆಯುತ್ತದೆ. ಪ್ರವಾಸಿಗರು, ಬೆಂಗಳೂರಿನತ್ತ ಹೋಗುವ ಚಳವಳಿಗಾರರು ಯಾವ ಕಾಲದಲ್ಲಿ ಬರಲಿ, ಅವರ ಒಡಲು ತುಂಬಲು ಸಿದ್ಧಗಂಗೆ ಸದಾ ಸಿದ್ಧವಾಗಿರುತ್ತದೆ. ಪಾಕಶಾಲೆಯ ಒಲೆ ಎಂದೂ ಆರದ ಕ್ಷೇತ್ರವಿದು. ಪ್ರವಾಸಿಗರಿಗೆ ಸಿದ್ಧಗಂಗೆಯಲ್ಲಿ ನನ್ನ ಊಟ ವಸತಿ ಕಾಯ್ದಿರಿಸಿದೆ ಎಂಬ ಭಾವನೆ ಬರುವಂತೆ ಮಾಡಿದೆ.

ಶ್ರೀ ಕ್ಷೇತ್ರಕ್ಕೆ ಭಕ್ತಾದಿಗಳು ಬರುವಂತೆ ಎಲ್ಲಾ ಪಕ್ಷದ ರಾಜಕಾರಣಿಗಳು ಸಾಲುಗಟ್ಟಿ ಬರುತ್ತಾರೆ. ಶ್ರೀಗಳವರ ದರ್ಶನ ಮಾಡುತ್ತಾರೆ. ಆದರೆ ಶ್ರೀಮಠ ಎಂದೂ ಒಂದು ರಾಜಕೀಯ ಪಕ್ಷದ ಪರ ವಾಲಿಲ್ಲ. ರಾಜಕೀಯದ ಸೋಂಕಿಗೆ ಒಳಗಾಗದೆ ಅದು ಧರ್ಮದ ಕೇಂದ್ರವಾಗಿಯೆ ವಿರಾಜಿಸುತ್ತಿದೆ. ಮಾನವೀಯತೆಯ ಶೋಷಣೆಯಾದಾಗ ಮೊದಲು ಮರುಗುವ ಕ್ಷೇತ್ರ ಇದಾಗಿದೆ. ಮಾನವೀಯ ಸೇವೆಗೆ ಪ್ರಾಂಜಲ ಚಿತ್ತದಿಂದ ಮೊದಲಾಗುತ್ತದೆ. ಮಗುವಿನ ಸೇವೆ ಮಾಡುವ ಮಾತೆಯೋಪಾದಿಯಲ್ಲಿ ಶ್ರೀಮಠ ಪಾಲ್ಗೊಳ್ಳುತ್ತದೆ. ಶ್ರೀ ಕ್ಷೇತ್ರ ಮಾನವೀಯತೆಯ ಮಾತೃ ಮಂದಿರವಾಗಿದೆ. ಅಣ್ಣ ಬಸವೇಶ್ವರರ ಆದರ್ಶವನ್ನು ಅಕ್ಷರಶಃ ಪಾಲಿಸುವ ಸಂಕಲ್ಪ ಹೊತ್ತು ಸೇವಾಜೀವಿಯಾಗಿ ಸದಾ ನಡುಕಟ್ಟಿ ನಿಂತಿದೆ.



**ಶ್ರೀವಾಣಿ**

*ಮನುಷ್ಯ ಸದಾ ತನ್ನನ್ನು ತಾನು ವಿಮರ್ಶಿಸಿಕೊಳ್ಳುತ್ತಿರಬೇಕು. ಯಾವಾಗ ಮನುಷ್ಯ ತನ್ನನ್ನು ತಾನು ಸುಧಾರಿಸಿಕೊಳ್ಳುವನೊ ಆಗ ಮಾತ್ರ, ತಾನು ಯೋಗ್ಯನಾಗಿ ಬಾಳಿ ಜಗತ್ತಿನಲ್ಲಿ ಪ್ರೇಮದ ಬಾಳನ್ನು ಬಾಳುವುದು ಸಾಧ್ಯವಾಗುವುದು.*



# ಸಿದ್ಧಗಂಗೆಯ ಸಿರಿ

– ಹೀ.ಚಿ. ಶಾಂತವೀರಯ್ಯ
ಸಾಹಿತಿಗಳು,
೯, ಮನುವನ, ವಿಜಯನಗರ,
ಬೆಂಗಳೂರು – ೫೬೦ ೦೪೦.

''ಸಿದ್ಧಗಂಗೆ'' ಒಂದು ಹೆಸರಲ್ಲ, ಅದೊಂದು ಮಂತ್ರ. ''ಸಿದ್ಧರು'' ಒಂದು ವ್ಯಕ್ತಿಯಲ್ಲ ಅದೊಂದು ಮಹಾನ್ ಶಕ್ತಿ. 'ಸಿದ್ಧಗಂಗೆ'ಯನ್ನು ಹೀಗೆ ಅರ್ಥೈಸಬಹುದು. ಸಿದ್ಧವಾದ ಗಂಗೆ, ಅಷ್ಟಸಿದ್ಧಿಗಳನ್ನು ಹೊಂದಿದ ಗಂಗೆ, ದೇವತ್ವವನ್ನು ಪಡೆದ ಗಂಗೆ, ಶುಭ ಮತ್ತು ಶುದ್ಧವಾದ ಗಂಗೆ, ಪ್ರಸಾದಗಂಗೆ ಮತ್ತು ಸಿದ್ಧರಿಂದ ಸ್ಥಾಪಿತವಾದ ಗಂಗೆ'' ಎಂದು. ಸಿದ್ಧಲಿಂಗೇಶ್ವರರ ಪಾದತೀರ್ಥವಾದ್ದರಿಂದ 'ಸಿದ್ಧಗಂಗೆ'.

ಪೌರಾಣಿಕವಾಗಿ ಗೌತಮ ಮಹರ್ಷಿಗಳ ಕ್ಷೇತ್ರ. ತಮಗೆ ಒದಗಿದ್ದ ಗೋವಧಾ ರೂಪದ ದೋಷವನ್ನು ಶಿವಾರಾಧನೆಯಿಂದ ಈ ಕ್ಷೇತ್ರದಲ್ಲಿ ಪರಿಹಸಿರಿಕೊಂಡರೆಂಬುದೂ ಪುರಾಣಕಥೆ. ಗೋಸಲಸಿದ್ದೇಶ್ವರರು ತಮ್ಮ ನೂರೊಂದು ಜನ ಶಿಷ್ಯರೊಂದಿಗೆ ಈ ಕ್ಷೇತ್ರದಲ್ಲಿ ಶಿವಯೋಗ ನಿಷ್ಠರಾಗಿದ್ದಾಗ ಗಂಗೆಯ ಅಪೇಕ್ಷೆಯಿಂದ ಬೆಟ್ಟದ ಮೇಲೆ ಪವಿತ್ರವಾದ ಸ್ಥಳದಲ್ಲಿ ತಮ್ಮ ಹಸ್ತದಿಂದ ಬಂಡೆಯನ್ನು ಬಗೆದಾಗ ಸಿದ್ಧವಾಗಿದ್ದ ಗಂಗೆ ಉದ್ಭವಿಸಿತೆಂದೂ ಅದನ್ನೇ 'ಸಿದ್ದಗಂಗೆ' ಎಂದೂ ಕರೆದರು.



ಸಿದ್ದಗಂಗೆಯ ಒಂದು ವಿಂಗಮ ನೋಟ

ಮುಂದೆ ಈ ಕ್ಷೇತ್ರದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರು. ಅಟವೀಶ್ವರ ಯೋಗಿಗಳು, ಉದ್ದಾನೇಶ್ವರ ಯತಿಗಳೂ ಶ್ರೀ ಕ್ಷೇತ್ರದ ಪುರೋಭಿವೃದ್ಧಿಗೆ ಕಾರಣರಾದರು.

ಶ್ರೀ ಸಿದ್ಧಗಂಗೆ ತ್ರಿವಿಧ ದಾಸೋಹಕ್ಕೆ ಪ್ರಸಿದ್ಧಿ, ಅನ್ನ, ಜ್ಞಾನ ಮತ್ತು ಧರ್ಮ, ಸಹಸ್ರಾರು ಶಿಷ್ಯರು ಇಲ್ಲಿ ಅಭ್ಯಾಸ ಮಾಡುತ್ತಿದ್ದಾರೆ. ಇಲ್ಲಿಯ ಒಲೆಯನ್ನು ಎಂದು ಯಾರು ಹಚ್ಚಿದರೋ ಗೊತ್ತಿಲ್ಲ. ಆದರೆ ಎಂದೂ ಆರಿಲ್ಲ ಮತ್ತು ಆರುವುದಿಲ್ಲ. ಇಲ್ಲಿ ಸಲ್ಲುವವರು ಎಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಎಲ್ಲಿಯೂ ಸಲ್ಲರು ಎಂಬುದು ಗಾದೆಯ ಮಾತಾಗಿದೆ.

'ಸಿದ್ಧಗಂಗೆ'ಯ ಸಂವಿಧಾನವೆಂದರೆ ಇಲ್ಲಿಗೆ ಬರುವ ಪದಾರ್ಥ ಹೋಗುವಾಗ ಪ್ರಸಾದವಾಗಬೇಕು. ಹಾಗೆಯೇ ನೀರು-ತೀರ್ಥ, ಸಗಣಿ-ವಿಭೂತಿ, ಮಣ್ಣು-ಹೊನ್ನು, ಮಾತು-ಮಂತ್ರ, ಅಂಗ- ಲಿಂಗ, ನರ-ಹರ ಇಲ್ಲಿಗೆ ಬರುವಾಗ ಮನುಷ್ಯರಾಗಿದ್ದವರು ಹೋಗುವಾಗ 'ಮಾದೇವ'ರಾಗುತ್ತಾರೆ. ಇದೇ ಸಿದ್ಧಗಂಗೆಯ ಸಿದ್ಧಿ ಮತ್ತು ಪ್ರಸಿದ್ಧಿ.

### ಶ್ರೀವಾಣಿ

*ಶ್ರೀಮಠದಲ್ಲಿ ಆಶ್ರಯ ಪಡೆದಿರುವ ಅದೆಷ್ಟೋ ಮಕ್ಕಳಿಗೆ ಹಾಸಿಕೊಳ್ಳಲು ಹಾಸಿಗೆ ಬೇಡ ಚಾಪೆ ಕೂಡ ಗತಿಯಿಲ್ಲ. ಹೊದಿಯಲು ಒಂದು ಹಚ್ಚಡ ಅಂದರೆ ಬೆಡ್‌ಷೀಟ್ ಕೂಡ ಇಲ್ಲ. ಒಂದೇ ಬೆಡ್‌ಷೀಟನ್ನು ಇಬ್ಬರು ಹೊದಿಯುತ್ತಿರುವ ದೃಶ್ಯ ನೋಡಿದಾಗ ಅತೀವ ನೋವಾಗುತ್ತದೆ. ಒಂದು ಟವೆಲ್ ಕೊಳ್ಳಲು ಒದ್ದಾಡುತ್ತವೆ. ಅಂಥ ಮಕ್ಕಳ ಬಗ್ಗೆ ನಮಗೆ ಸದಾ ಚಿಂತೆಯಾಗಿದೆ.*



ಪ್ರಚಲಿತವಿರುವ ಮೂರು ಜನ ಮಹಾತ್ಮರನ್ನು ಸ್ಮರಿಸಬಹುದು. ಒಬ್ಬರು ಪುರಾಣ ಪ್ರಸಿದ್ಧರಾದ ಓಹಿಲಯ್ಯನವರು. ಇವರು ಶಿವನನ್ನು ಕುರಿತು ತಪಸ್ಸುಮಾಡಿ ಸಿದ್ಧಿಪಡೆದು ಕೈಲಾಸ ಪದವಿಯನ್ನು ಪಡೆದರು.

ಇತಿಹಾಸ ಪುರುಷರಾದ 'ಉದ್ಭಟದೇವರು' ಓಹಿಲಯ್ಯನವರನ್ನು ಓ! ಓಹಿಲ ನೀನು ಮಹಾಸ್ವಾರ್ಥಿ ನೀನೊಬ್ಬನೇ ಕೈಲಾಸ ಪದವಿ ಪಡೆದೆ. ನಿನ್ನನ್ನೇ ನಂಬಿದವರಿಗೆ ಕೈಕೊಟ್ಟೆ ಇದು ಸರಿಯಲ್ಲ. ನೋಡು ನಾನು ನನ್ನ ನಂಬಿದ ಇಡೀ ಊರನ್ನೇ ಕೈಲಾಸಕ್ಕೆ ಕೊಂಡೊಯುತ್ತೇನೆ ಎಂದು ತಪಸ್ಸುಮಾಡಿ ಶಿವನನ್ನು ಮೆಚ್ಚಿಸಿ. ಇಡೀ ಊರನ್ನೇ ಕೈಲಾಸಕ್ಕೆ ಕೊಂಡೊಯ್ದರು.



ನಾಡಿನ ಪುಣ್ಯ ಪುರುಷರಾದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು 'ಉದ್ಭಟ'ನನ್ನು ಕಂಡು ನಕ್ಕು ಉದ್ಭಟಯ್ಯನವರೇ ನೀವು ಮಹಾಸ್ವಾರ್ಥಿಗಳು. ನಿಮ್ಮ ಊರಿನವರನ್ನು ಮಾತ್ರ ಕೈಲಾಸಕ್ಕೆ ಕೊಂಡೊಯ್ದಿರಿ. ನಿಮ್ಮ ಪಕ್ಕದ ಊರಿನವರು ಮಾಡಿದ ಪಾಪವೇನು? ನೋಡಿ ನಾನು ಹಾಗೆ ಕೈಲಾಸಕ್ಕೆ ಕೊಂಡೊಯ್ಯದೆ ಈ ಲೋಕವನ್ನೇ ಕೈಲಾಸಮಾಡುತ್ತೇವೆ ಎಂದರು.

ದೇವಲೋಕ (ಕೈಲಾಸ)ದ ಹುಚ್ಚು ಬಿಡಿಸಿ ಈ ಲೋಕವನ್ನೇ ದೇವಲೋಕಮಾಡಿ ಪ್ರತಿಯೊಬ್ಬ ನರನೂ ಹರನಾಗುವಂತೆ ಮಾಡಿ 'ಮನೆಯೇ ದೇವಾಲಯ, ನಡೆದಾಡುವವರು ನಿಜಕ್ಕೂ ಶಿಸ್ವರೂಪಿಗಳಂತೆ ಮಾಡಿದ ಮಹಾಮಹಾತ್ಮರು ಮಹಿಮಾಪುರುಷರು ಶ್ರೀ ಶಿವಕುಮಾರ ಸ್ವಾಮಿಗಳು. ಈ ಮಹಾಗುರುವನ್ನು ನೋಡುವುದು, ಮಾತನಾಡಿಸುವುದು, ಸ್ಪರ್ಶಿಸುವುದು ಪುಣ್ಯಕರವೆಂದು ಕವಿ ಹೀಗೆ ವಿವರಿಸಿದ್ದಾರೆ.

''ಅಳುರದು (ಸುಡರು) ಕಿಚ್ಚು, ಮುಟ್ಟರು (ಕಡಿಯರು) ವಿಷಾಹಿ (ವಿಷದಸರ್ಪ) ಮಹಾಗುರುವಿದ್ದ ನಾಡು ಬೆಳೆವುದು ಬೇಡಿದಂತೆ ಮಳೆಕೊಳ್ವುದು ಎನಿಪ್ಪ ಜಸಕ್ಕೆ ನೋಂತ ಶ್ರೀ ಸಿದ್ಧಗಂಗೆಯ ಶ್ರೀ ಗುರುವರ್ಯರಂ ಪೆಸರ್ಗೊಳ್ವುದು ಪುಣ್ಯಕಾರಕ'' ಎಂದು ಪ್ರಾರ್ಥಿಸಿದ್ದಾರೆ.

''ಶ್ರೀ ಗುರುನಿದ್ರೈಗೈದರೆ ಜಪ ಕಾಣಿರೋ ಎದ್ದಿದ್ದರೆ ಶಿವರಾತ್ರಿ ಕಾಣಿರೋ. ನೋಡಿದರೆ ಪಾಪಕ್ಷಯ, (ಕೃಪಾದೃಷ್ಟಿ) ನಡೆದುದೇ ಪಾವನಕ್ಷೇತ್ರ, (ಸಿದ್ಧಗಂಗೆ) ನುಡಿದುದೇ ಶಿವಮಂತ್ರ, ಮುಟ್ಟಿದುದೇ ಸರ್ವಸಿದ್ಧ (ಪರುಷ) ಮನವೇ ಶಿವಲಿಂಗ, ಕಾಯಕವೇ ಕೈಲಾಸ'' ಎಂಬ ವಚನಕ್ಕೆ ಭಾಷ್ಯ ಬರೆದವರು ಶ್ರೀ ಸಿದ್ಧಗಂಗಾ ಶ್ರೀಗಳವರು.

ಪ್ರಕೃತಿಯಲ್ಲಿ ಮೂರು ತೆರನ ವೃಕ್ಷಗಳಿವೆ. ಒಂದು ಹಲಸು, ಎರಡನೆಯದು ಮಾವು, ಮೂರನೆಯದು ಪಾದರಿ (ಪಾದ್ರಿ) ಒಂದೊಂದಕ್ಕು ತುಂಬ ವ್ಯತ್ಯಾಸಗಳಿವೆ.

'ಹಲಸು' ಹೂಬಿಡುವುದಿಲ್ಲ. ನೇರವಾಗಿ ಕಾಯಿಯಾಗಿ ನಿಷ್ಫಲವಾಗುವುದು ಕಡಿಮೆ. ಅದು ನೂರು ಕಾಯಿಬಿಟ್ಟರೆ ಉದುರುವ ಕಾಯಿ ಒಂದು ಅಥವಾ ಎರಡು. ಹಲಸಿನಲ್ಲಿ ಬಹುಪಾಲು ಫಲವಾಗುತ್ತವೆ. ಅದರಲ್ಲಿ ನಿಷ್ಫಲವೇ ಇಲ್ಲ.

'ಮಾವು' ಹಾಗಲ್ಲ. ಮಾವಿನಮರ ಮೈತುಂಬ ಹೂಬಿಡುತ್ತದೆ. ಬಿಟ್ಟ ಹೂವೆಲ್ಲ ಕಾಯಾಗದು, ಮಳೆ, ಗಾಳಿಗೆ ಉದುರುತ್ತವೆ. ನೂರರಲ್ಲಿ ಹತ್ತು ಅಥವಾ ಇಪ್ಪತ್ತು ಭಾಗ ಕಾಯಾಗಬಹುದು.

ಪಾದರಿ (ಪಾದ್ರಿ) ಹಾಗಲ್ಲ. ಒಂದೆಲೆ ಇಲ್ಲದಂತೆ ಲಕ್ಷೋಪಲಕ್ಷ ಹೂ ಬಿಡುತ್ತದೆ. ಆದರೆ ಒಂದು ಹೂವೂ ಹೀಚು, ಕಾಯಿ ಆಗುವುದಿಲ್ಲ. ಇದೇ ರೀತಿ ಆಡದೆ ಮಾಡು(ಬಿಡು)ವವನು ರೂಢಿಯೊಳಗೆಲ್ಲ ಉತ್ತಮ, ಆಡಿ ಮಾಡುವವನು (ಮಧ್ಯಮ) ಆಡಿಯೂ ಮಾಡದವನು ಅಧಮ ಎಂದು ಗುರುತಿಸಿದ್ದಾರೆ.

ಶ್ರೀ ಸಿದ್ಧಗಂಗಾಮಠ ಸದ್ದುಗದ್ದಲವಿಲ್ಲದೆ ಹಲಸಿನ ಮರದಂತೆ ಸೇವೆಸಲ್ಲಿಸಿದೆ; ಸಲ್ಲಿಸುತ್ತಿದೆ. ಭಾರತೀಯ ಸರ್ವೇಕ್ಷಣಾಲಯ ಪ್ರಕಾರ ಕರ್ನಾಟಕದಲ್ಲಿ ಅಕ್ಷರಸ್ಥರ ಸಂಖ್ಯೆ, ವಿದ್ಯಾವಂತರ ಸಂಖ್ಯೆ, ಪಂಡಿತರ ಸಂಖ್ಯೆ, ಜ್ಞಾನಿಗಳ ಸಂಖ್ಯೆ ಹೆಚ್ಚಾಗಲು ಶ್ರೀಮಠಗಳೇ ಕಾರಣ, ಅದರಲ್ಲೂ ಸಿದ್ಧಗಂಗಾ ಶ್ರೀಮಠ ಮುಖ್ಯಕಾರಣ ಎಂದಿರುವುದು. ಸಿದ್ಧಗಂಗೆಯ ಸೇವೆಗೆ ಸಂದ ಪುರಸ್ಕಾರ. ★



# ನೆನಪಿನಂಗಳದಲ್ಲಿ ಶ್ರೀಗುರು

– ಬಾ.ಹ. ರಮಾಕುಮಾರಿ
ಲೇಖಕಿ,
೨೪ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ,
ತುಮಕೂರು.

ಶ್ರೀ ಸಿದ್ಧಗಂಗಾ ಕ್ಷೇತ್ರವು ಧರ್ಮದ ತಳಹದಿಗಿಂತಲೂ ಜ್ಞಾನದ ತಳಹದಿಯ ಮೇಲೆ ನಿಂತಿದೆ ಎನ್ನುವುದರಿಂದಲೇ ಪ್ರತಿಯೊಬ್ಬರಿಗೂ ಅತ್ಯಂತ ಪ್ರೀತಿಯ ತಾಣ ಇದಾಗಿದೆ. ನಡೆದಾಡುವ ದೇವರು, ಜ್ಞಾನನಿಧಿ, ತಪೋನಿಧಿ ಎಂದೆಲ್ಲಾ ವಿಶೇಷಣಗಳಿಂದ ಕರೆಯುವ ಶ್ರೀಮಠದ ಮಹಾನ್ ಚೇತನವಾದ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗಳು ಆಧುನಿಕ ಬಸವಣ್ಣ ಎಂದು ಖ್ಯಾತನಾಮರಾಗಿದ್ದಾರೆ. ಶ್ರೀ ಶ್ರೀಯವರ ಸಾಧನೆ ಪವಾಡ ಸದೃಶವಲ್ಲ, ಮಾಂತ್ರಿಕವೂ ಅಲ್ಲ. ದಿನದಿಂದ ದಿನಕ್ಕೆ, ಕಾಲದಿಂದ ಕಾಲಕ್ಕೆ 'ಕಾಯಕವೇ ಕೈಲಾಸ' ಎಂದು 'ನುಡಿದಂತೆ ನಡೆ'ದುಕೊಂಡು ಬಂದು ಅಹರ್ನಿಶಿ ದುಡಿದ ಸಾವಿರಾರು, ಲಕ್ಷಾಂತರ ಕೈಗಳು ನಿರ್ಮಿಸಿದಂಥ ನಲ್ಮೆಯ ಸ್ಥಳ. ಅಭಿವೃದ್ಧಿಗೆ ಒಂದು ಸಾಕ್ಷಿಯಿದ್ದಂತೆ ರಾರಾಜಿಸುತ್ತಿದೆ.



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವ

ಗ್ರಾಮೀಣ ಪ್ರದೇಶದ, ಬಡಜನರ ಮಕ್ಕಳಿಗೆ ಅಕ್ಷರದಕ್ಕುವುದೇ ಕಷ್ಟವಾಗಿದ್ದ ಕಾಲದಲ್ಲಿ, ಉಳ್ಳವರು ಎಲ್ಲಿಗಾದರೂ ಕಳುಹಿಸಿ ಮಕ್ಕಳನ್ನು ಅಕ್ಷರಸ್ಥರನ್ನಾಗಿಸುತ್ತಿದ್ದ ಪರಿಸ್ಥಿತಿಯಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ಒಂದೆಡೆ ಜ್ಞಾನದ ಸೆಲೆ ಬತ್ತದಂತೆ, ದಾಸೋಹದ ಒಲೆ ಆರದಂತೆ ನೋಡಿಕೊಂಡುದು ಮಾತ್ರವಲ್ಲ ಸಾವಿರಾರು ಬಡಮಕ್ಕಳಿಗೆ ಆಸರೆಯಾಗಿ ನಿಂತು ಅನ್ನ, ಜ್ಞಾನ ಎರಡನ್ನೂ ನೀಡಿದ ಜ್ಞಾನನಿಧಿಯಾದರು. ಇಲ್ಲಿ ಕಲಿತವರು ಇಂದು ಏನೆಲ್ಲಾ ಆಗಿದ್ದಾರೆ? ಎಲ್ಲರನ್ನೂ ಒಂದೇ ತಕ್ಕಡಿಯಲ್ಲಿ ತೂಗಲಾಗುವುದಿಲ್ಲ. ಉನ್ನತಾಧಿಕಾರಿಗಳಾಗಿ, ವಿಶ್ವವಿದ್ಯಾನಿಲಯದ ಉತ್ತುಂಗ ಶಿಖರಕ್ಕೇರಿದವರು, ಸಾಹಿತಿ, ಲೇಖಕರು, ಕವಿಗಳಾಗಿ, ವಿಜ್ಞಾನಿಗಳಾಗಿ, ಇಂಜಿನಿಯರ್ ಆಗಿ, ರಾಜಕಾರಣಿಗಳಾಗಿ ಉದ್ಯಮಿಗಳಾಗಿ, ಶಿಕ್ಷಕರಾಗಿ, ಸರ್ಕಾರಿ ನೌಕರರಾಗಿ ಕೆಲವರು ರೈತರಾಗಿ ಕೃಷಿಕತನಕ್ಕೆ ಒಂತಿರುಗಿದವರೂ ಇದ್ದಾರೆ. ಸರ್ಕಾರೀ ವ್ಯವಸ್ಥೆಯಲ್ಲಿ ಮಾಡಲಾಗುತ್ತಿದ್ದ ಕಾರ್ಯದ ಹಲವು ಪಟ್ಟು ನೂರಾರುಪಟ್ಟು ಅದ್ಭುತ, ಆಶ್ಚರ್ಯವೆನ್ನುವಂತಹ ಸಾಧನೆ ಮಾಡಿರುವುದನ್ನು ನೋಡಿದಾಗ ಮನಸ್ಸು ಮೂಕವಾಗಿ ಮೌನವಾಗಿ ಮಣಿಯುತ್ತದೆ. ಆದರೆ ಅದನ್ನು ಕ್ರೋಢೀಕರಿಸಿ, ಹಂಚಿಕೆ ಮಾಡುವುದು ಏಕಕಾಲದಲ್ಲಿ ಸಾವಿರಾರು ಮಂದಿಯನ್ನು ಸುಧಾರಿಸುವುದು

**ಶ್ರೀವಾಣಿ**

ಪಾಶ್ಚಾತ್ಯರು ಕಾಲದ ಮಹತ್ವ ತಿಳಿದು ಅದಕ್ಕೆ ಬೆಲೆಕೊಟ್ಟು, ಅದರ ರಹಸ್ಯವನ್ನು ಅರಿತು ಪ್ರಗತಿ ಹೊಂದಿದರು. ಮಹಾತ್ಮರು, ದೊಡ್ಡವರು ಕಾಲದ ಮಹತ್ವ ತಿಳಿದು ದೊಡ್ಡವರಾದರು, ನಾವು ಅರಿಯದೆ ಹಿಂದೆ ಬಿದ್ದೆವು.



ಸುಲಭದ ಕೆಲಸವೇನಲ್ಲ. ಅಂತಹ ತಪೋಶಕ್ತಿ, ಧ್ಯಾನಶಕ್ತಿಯ ಬಲದಿಂದ ಇಷ್ಟೆಲ್ಲಾ ಸಾಧ್ಯವಾಗಿದೆ ಎನ್ನಬಹುದು.

## *ಜನಮನದಲ್ಲಿ ನೆಲೆನಿಂತವರು*

ಸುಮಾರು ೭೦ರ ದಶಕದಲ್ಲಿ ನಾವು ಬಿ.ಎ. ಓದುತ್ತಿದ್ದ ಕಾಲ. ಹಾಸ್ಟೆಲಿನಲ್ಲಿದ್ದೆವು. ಶಿವರಾತ್ರಿ ಸಮೀಪಿಸಿದಾಗ ಸಿದ್ಧಗಂಗೆ ಜಾತ್ರೆ ಎಂಬುದೊಂದು ಈ ಭಾಗದ ದೊಡ್ಡ ಉತ್ಸವ. ದನಗಳ ಜಾತ್ರೆಗೆ ಎತ್ತೆಲ್ಲಿಂದಲೋ ಸಾಲುಸಾಲಾಗಿ ನಡಿಗೆಯಲ್ಲಿ ದನ ಹೊಡೆದುಕೊಂಡು ಗಾಡಿ ಕಟ್ಟಿಕೊಂಡು ಹೋಗುತ್ತ – ಬರುತ್ತ ಇದ್ದುದನ್ನು ಕಾಣುವುದೇ ಒಂದು ಸಂಭ್ರಮದ ಸಂಗತಿಯಾಗಿತ್ತು (ಈಗಿನಂತೆ ಆಟೋಗಳಾಗಲೀ, ಟೆಂಪೋ, ಇಷ್ಟೊಂದು ಬಸ್ಸುಗಳಾಗಲೀ ಇರಲಿಲ್ಲ). ಹಾಸ್ಟೆಲ್‌ನಲ್ಲಿದ್ದ ಹುಡುಗಿಯರ ಮನೆಯವರು, ನೆಂಟರಿಷ್ಟರು ಜಾತ್ರೆಗೆ ಬಂದು ಒಂದೆರಡು ದಿನ ಹಾಸ್ಟೆಲ್‌ನಲ್ಲಿ ತಂಗಿಹೋಗುತ್ತಿದ್ದರು. ಆಗೆಲ್ಲಾ ಅವರಿಗೆ ಕಂಪನಿಕೊಡಲು ಅಥವಾ ಮಾರ್ಗದರ್ಶನ ನೀಡಲು ಅವರೊಂದಿಗೆ ನಾವೆಲ್ಲ ಹೋಗುತ್ತಿದ್ದೆವು. ಜಾತ್ರೆ ಎನ್ನುವುದೇ ಒಂದು ಅನಿರ್ವಚನೀಯ ಅನುಭವ. ವಸ್ತುಪ್ರದರ್ಶನ ಅಂದಿನಿಂದ ಇಂದಿನವರೆಗೂ ಪ್ರಮುಖ ಆಕರ್ಷಣೆ. ವಸ್ತುಪ್ರದರ್ಶನದ ಜಾಗದಲ್ಲಿ ನಿಜವಾದ ಗಿಡ, ಬೆಳೆ, ತರಕಾರಿಗಳನ್ನು ಬೆಳೆದು ತೋರಿಸುತ್ತಿದ್ದುದನ್ನು ಆಗ ಮೊಟ್ಟಮೊದಲ ಬಾರಿಗೆ ನೋಡಿ ಮೂಕ ವಿಸ್ಮಿತಳಾಗಿದ್ದೆ.



ಶ್ರೀಮಠದಲ್ಲಿ ಪ್ರತಿದಿನ ನಡೆಯುವ ಸಾಮೂಹಿಕ ಪ್ರಾರ್ಥನೆ

ಜಾತ್ರೆ ಇರಲಿ ಬೇರೆ ದಿನಗಳಿರಲಿ ಯಾರೇ ಭೇಟಿ ನೀಡಿದರೂ ಊಟ ಮಾಡದೇ ಬರುವಂತಿಲ್ಲ ಎನ್ನುವುದು ಕಟ್ಟಳೆ ಅಲ್ಲದಿದ್ದರೂ ಅಲ್ಲೊಂದು ಸೆಳೆತವಿರುತ್ತಿತ್ತು. ಸ್ವಾಮೀಜಿಗಳು ಪ್ರತಿಯೊಬ್ಬರಿಗೂ ಪ್ರಸಾದ ಸ್ವೀಕರಿಸಿ ಹೋಗಿ ಎನ್ನುತ್ತಿದ್ದುದು ಒಂದು ಮಹಾಮಂತ್ರವಾಗಿತ್ತು. ನೂರಾರು ಬಾಲಕರು ಸಮವಸ್ತ್ರ (ಕೆಂಪುಟವೆಲ್) ಹೊದ್ದು ಸಂಜೆಯ ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗುವುದು. ಸ್ವತಃ ಸ್ವಾಮೀಜಿಗಳು ಭಾಗವಹಿಸುತ್ತಿದ್ದುದು ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಹಾಗೂ ಅಷ್ಟೊಂದು ಮೋಹಕವಾದ, ಶಿಸ್ತುಬದ್ಧ ಚಟುವಟಿಕೆ ಎನಿಸುತ್ತದೆ.

ಯಾವುದೇ ದ್ವಂದ್ವವಿಲ್ಲದ, ನೇರ ನಡೆನುಡಿಯ ಅಸ್ಖಲಿತ ನುಡಿ ಗಡಣದ ಮಹಾನ್ ಚೇತನಕ್ಕೆ ಇಂದು ಸರಿಸಾಟಿ ಯಾರಿಲ್ಲ. ಅನ್ನ-ಅಕ್ಷರದ ಮೂಲಕ ಬದುಕನ್ನು ಕೊಟ್ಟಂತಹ ಆ ಮೂಲಕ ಪೀಳಿಗೆ-ಪೀಳಿಗೆಯನ್ನೇ ಮುನ್ನಡೆಸಿಕೊಂಡು ಹೋಗುವಂತ ಚಾಲನೆ ದೊರಕಿಸಿಕೊಟ್ಟಂತಹ ಅಗಾಧ ಶಕ್ತಿವಂತ ಯೋಗ ಇವರು. ಇಲ್ಲಿನ ಅನ್ನತಿಂದವರು, ಗಾಳಿ ಸೇವಿಸಿ ನೀರು ಕುಡಿದವರು ತಮ್ಮ ಬದುಕಿನಲ್ಲಿ, ದುಡಿಮೆ ಕ್ಷೇತ್ರದಲ್ಲಿ ಸಟೆಗೆ ಅವಕಾಶವಿಲ್ಲದಂತೆ ನಡೆದುಕೊಂಡರೆ ತಾವು ನಡೆದಲ್ಲಿ, ನುಡಿದಲ್ಲಿ, ನಿಂತಲ್ಲಿ, ಹೋದಲ್ಲಿ ಒಳ್ಳೆಯದನ್ನೇ ಕಾಣಬಹುದು.

ನನಗೆ ಈಗಲೂ ನೆನಪಿದೆ. ನಮ್ಮ ಮನೆಯ ಮುಂದಿನ ಕೇವಲ ಅಂಗೈ ಅಗಲ ಜಾಗದಲ್ಲಿ ಹಿತ್ತಲ ಅವರೆಗಿಡ ಹಾಕಿದ್ದು, ಅದು ದೊಡ್ಡದಾದಾಗ ಮನೆ ಮೇಲೆ ಹಬ್ಬಿಸಿದ್ದು, ಮನೆಯ ತಾರಸಿಯೆಲ್ಲಾ ಬೆಳ್ಳಂ ಬೆಳ್ಳಗೆ ಕಾಣುವ ಹಾಗೆ ಹೂಬಿಟ್ಟು ರಾಶಿ ರಾಶಿ ಹಿತ್ತಲ ಅವರೇಕಾಯಿ ಗೊನೆ ತುಂಬಿಕೊಂಡಾಗ ಮೊದಲ ಸಲ ಅವನ್ನು ಕಿತ್ತು ಒಂದು ಬುಟ್ಟಿ ತುಂಬಾ ತೆಗೆದುಕೊಂಡು ಹೋಗಿ ಶ್ರೀಮಠಕ್ಕೆ ಕೊಟ್ಟಿದ್ದು. ಹಾಗೇ ಮೊದಲಬಾರಿಗೆ ಬಿಟ್ಟ ಕುಂಬಳಕಾಯಿಯನ್ನು,

**ಶ್ರೀವಾಣಿ**

ನಮ್ಮ ಸಂಸ್ಕೃತಿಯ ದಿವ್ಯ ಬೆಳಕಿಗೆ ಅನೀತಿಯ, ಭ್ರಷ್ಟಾಚಾರದ ಕವಚವನ್ನ ತೊಡಿಸಿದ್ದಾರೆ. ಅದನ್ನು ಕಿತ್ತು ಹಾಕಿದರೆ ಮಾನವೀಯತೆಯ ಬಂಗಾರ ಅರಳುತ್ತದೆ. ಜಗತ್ತಿನ ಕಣ್ಣು ತೆರೆಯುತ್ತದೆ.

ಗೊಂಚಲು ಗೊಂಚಲು ಬಿಳಿಗುಲಾಬಿ ಬಿಟ್ಟಿದ್ದನ್ನು, ಮೊದಲಬಾರಿಗೆ, ನಮ್ಮ ತಾಯಿ ಮಠಕ್ಕೆ ಕೊಟ್ಟು ಕಳುಹಿಸುತ್ತಿದ್ದರು. ನಾವೆಲ್ಲ ಅದನ್ನು ಪ್ರಶ್ನಿಸುತ್ತಿದ್ದುದೂ ಉಂಟು. ಅವರಿಗೆಲ್ಲಾ ತೀರಾ ಸರಳವಾದ ಒಂದು ನಂಬಿಕೆ ಇತ್ತು. ಪ್ರಕೃತಿ ಅಥವಾ ದೇವರು ಕೊಟ್ಟಿದ್ದನ್ನು ಮೊದಲು ದೇವರಿಗೇ ಅರ್ಪಿಸಬೇಕು ಎಂದು. ನಾವು ಅದನ್ನು ನಂಬುತ್ತಿರಲಿಲ್ಲವಾದೂ, ಹಂಚಿ ತಿನ್ನಬೇಕು ಎಂಬ ಬೇರೊಂದು ಆಲೋಚನೆಯ ರೂಪದಲ್ಲಿ ಅದನ್ನು ಅನುಮೋದಿಸುತ್ತಿದ್ದೆವು. ಹೀಗೆ ಕೊಟ್ಟಂತಹ ಅದು ಒಂದು ಕಾಳಾಗಿರಲಿ, ಕಾಯಾಗಿರಲಿ ಅಡಿಗೆಯೊಳಗೆ ಸೇರಿ ಸಾವಿರಾರು ಜನರಿಗೆ ಹಂಚಿಕೆಯಾಗುತ್ತಿತ್ತಲ್ಲ; ಆ ಒಂದು ಕಲ್ಪನೆ ಎಷ್ಟೊಂದು ಖುಷಿಕೊಡುತ್ತಿತ್ತು.

ಇಂತಹ ಅನೇಕ ವಿಚಾರಗಳು ನಮ್ಮನ್ನು ರೂಪಿಸಿವೆ. ಮಠದ ಸಾಮೂಹಿಕ ಜೀವನ, ಸಾಮೂಹಿಕ ಊಟ, ದಾಸೋಹದಪರಿ, ಶ್ರೀ ಶ್ರೀ ಸ್ವಾಮೀಜಿಯವರ ನಡೆ, ನುಡಿಗಳು ಹತ್ತಿರದಿಂದ ಬಲ್ಲಂತಹವರ, ಕಂಡು ಕೇಳಿದವರ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿವೆ. ವ್ಯಕ್ತಿತ್ವ ರೂಪಿಸಿವೆ ಎಂದರೆ ತಪ್ಪಾಗಲಾರದು. ಈ ಕಾರಣಕ್ಕೆ ನನಗೆ ಈಗಲೂ ಶ್ರೀ ಕ್ಷೇತ್ರದ ನೆನಪು ಹಸಿರಾಗಿದೆ.

ಆದರೆ ಅತಿಹೆಚ್ಚು ಪ್ರೌಢಶಾಲೆಗಳನ್ನು ತೆರೆದಿದ್ದಾರೆ. ಇದರ ಹಿಂದಿರುವ ಆಲೋಚನಾಕ್ರಮ ತುಂಬ ಅದ್ಭುತವಾದುದು. ಸಾಮಾನ್ಯವಾಗಿ ಪ್ರೈಮರಿ-ಮಾಧ್ಯಮಿಕ ಶಾಲೆಗಳು ಬಹುತೇಕ ಗ್ರಾಮಗಳಲ್ಲಿ ಇದ್ದೇ ಇವೆ. (ಸರ್ಕಾರದ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಯೋಜನೆಯಡಿ) ಆದರೆ ಪ್ರೌಢಶಾಲೆಗಳ ಕೊರತೆ ಇತ್ತು. ಎಸ್.ಎಸ್.ಎಲ್.ಸಿ. ಒಬ್ಬ ವಿದ್ಯಾರ್ಥಿಯ ಶೈಕ್ಷಣಿಕ ಜೀವನವನ್ನು ನಿರ್ಧರಿಸುವ ಘಟ್ಟವಾದ್ದರಿಂದ ಎಸ್.ಎಸ್.ಎಲ್.ಸಿ.ವರೆಗೆ ಗ್ರಾಮೀಣ ವಿದ್ಯಾರ್ಥಿಗಳು ಓದಲೇಬೇಕು. ಹಾಗೆ ಓದುವುದರಿಂದ ಮುಂದಿನ ಜೀವನ ರೂಪಿಸಿಕೊಳ್ಳು ಸಾಧ್ಯ ಎಂದು ಭಾವಿಸಿರಬಹುದು ಎಂದು ನನ್ನ ಭಾವನೆ. ಅದೇನೆ ಇರಲಿ. ಆದರಿಂದಾಗಿ ಸಾವಿರಾರು ಗ್ರಾಮೀಣ ಭಾಗದ ಜನರ ಮಕ್ಕಳು ಉದ್ಯೋಗ ಹಿಡಿದು ಬದುಕಲು, ತಮ್ಮ ಮಕ್ಕಳ ಭವಿಷ್ಯವನ್ನು ಇನ್ನಷ್ಟು ಮುಂದಕ್ಕೆ ಅಭಿವೃದ್ಧಿಪಡಿಸುವ ಮೆಟ್ಟಲುಗಳಾಗಲು ಸಹಾಯಕವಾಗಿದೆ ಎಂಬುದಷ್ಟೇ ಮುಖ್ಯ. ಇಂತಹ ಕಾರಣಕ್ಕಾಗಿ ಸಿದ್ಧಾರ್ಥ ಸಂಸ್ಥೆಯ ಮಾನ್ಯ ದಿ. ಗಂಗಾಧರಯ್ಯ ಅವರೂ ಕೂಡ ಸ್ಮರಣಾರ್ಹರು.

ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಶತಮಾನದಷ್ಟು ಸಾಧನೆಗೈದಿದ್ದಾರೆ.



ಗ್ರಾಮೀಣ ಮಕ್ಕಳಿಗೆ ಸಂಸ್ಕೃತ ಶಿಕ್ಷಣ

### ಅಕ್ಷರಕ್ರಾಂತಿ

ಸ್ವಾಮೀಜಿಯವರು ಗ್ರಾಮೀಣ ಮಕ್ಕಳನ್ನೇ ಕೇಂದ್ರವಾಗಿಟ್ಟುಕೊಂಡಂತೆ ವಿದ್ಯಾಕೇಂದ್ರಗಳನ್ನು ತೆರೆದಿರುವುದು ನನಗೆ ತುಂಬ ಇಷ್ಟವಾದ ಸಂಗತಿ. ಕೇವಲ ಒಂದು ಇಂಜಿನಿಯರಿಂಗ್ ಕಾಲೇಜು, ಒಂದು ಪಾಲಿಟೆಕ್ನಿಕ್ ಕಾಲೇಜು ತೆರೆದಿದ್ದಾರೆ. ಅತಿಕಡಿಮೆ ಬಿ.ಇಡಿ. ಡಿ.ಇಡಿ. ಕಾಲೇಜುಗಳಿವೆ.

ಇದು ನಿರಂತರ ಅಭಿವೃದ್ಧಿಪಥದತ್ತ ಎಲ್ಲರನ್ನು ಒಳಗೊಂಡಂತೆ ಮುಖ್ಯಪ್ರವಾಹದೊಡನೆ ಸೇರಿ ಚಲಿಸಬೇಕು. ಅದರ ಸಾಕಾರಕ್ಕಾಗಿ ಪ್ರತಿಯೊಬ್ಬರೂ ಕಾಯಕತತ್ವದಲ್ಲಿ ನಂಬಿಕೆ ಇಟ್ಟು ಶ್ರಮಿಸಬೇಕಾಗಿದೆ.

★

#### ಶ್ರೀವಾಣಿ

ಮಾತಿಗೆ ಮನೆ ಕಟ್ಟ ಬೆಳಗಿಸುವ, ಮನೆ ಸುಟ್ಟು ಬೂದಿಮಾಡುವ ಎರಡೂ ಶಕ್ತಿಗಳಿವೆ, ಇದನ್ನರಿತ ಮಾನವ ಮಾತನ್ನು ಮಾನವೀಯತೆಯಿಂದ ಬಾಳಲು ಸೃಷ್ಟ್ಯಾತ್ಮಕ ಶಕ್ತಿಯನ್ನಾಗಿ ಉಪಯೋಗಿಸಬೇಕು.



## ಸನ್ಮಾನಿತರ ಪರಿಚಯ



''ಶಾಂತ'',
ನಂ. ೨೫, ಬಾಕ್ಸೈಟ್ ರಸ್ತೆ, ಬಸವ ಕಾಲೋನಿ,
ಬೆಳಗಾವಿ – ೫೭೦೦೧೦.

*ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ, ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮದಿನವನ್ನು 'ಗುರುವಂದನ' ಸಮಾರಂಭವಾಗಿ ಸಡಗರ ಸಂಭ್ರಮ ಹಾಗೂ ಅರ್ಥಪೂರ್ಣವಾಗಿ ಆಚರಿಸುವ ದೃಷ್ಟಿಯಿಂದ ಪ್ರತಿವರ್ಷ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಗಣ್ಯರನ್ನು ಗೌರವಿಸುವ ಸತ್‌ಸಂಪ್ರದಾಯವನ್ನು ಹಮ್ಮಿಕೊಂಡು ನಡೆಸಿಕೊಂಡು ಬರಲಾಗುತ್ತಿದೆ. ಅದರಂತೆ ೯೭ನೇ ಗುರುವಂದನ ಸಮಾರಂಭದಲ್ಲಿ ನಾಲ್ಕು ಜನ ಗಣ್ಯರನ್ನು ಸನ್ಮಾನಿಸಲಾಗುತ್ತಿದೆ. ಪ್ರಸಿದ್ಧ ವೈದ್ಯರಾದ ಡಾ. ಎಸ್.ಜೆ. ನಾಗಲೋಟಿಮಠ ಅವರಿಗೆ 'ವಿಭೂತಿಪ್ರಿಯ'. ಜಾನಪದ ವಿದ್ವಾಂಸರಾದ ಡಾ. ಎಚ್.ಎಲ್. ನಾಗೇಗೌಡರಿಗೆ 'ಜಾನಪದ ಭೀಷ್ಮ', ಹಿರಿಯ ಸಂಶೋಧಕರಾದ ಪ್ರೊ. ಎನ್. ಬಸವಾರಾಧ್ಯರಿಗೆ 'ಸಂಶೋಧಕ ಶಿವರತ್ನ' ಹಾಗೂ ಕೈಗಾರಿಕೋದ್ಯಮಿ ಶ್ರೀ ಎನ್.ಆರ್. ಜಗದೀಶ್ ಅವರಿಗೆ ಕೈಗಾರಿಕಾರತ್ನ' ಪ್ರಶಸ್ತಿಗಳನ್ನು ನೀಡಿ ಗೌರವಿಸಲಾಗುತ್ತಿದೆ. ಈ ನಾಲ್ಕು ಜನರ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ.*

ಓಂ ಶ್ರೀ ಗುರುಬಸವಲಿಂಗಾಯ ನಮಃ

## 'ವಿಭೂತಿಪ್ರಿಯ'

## ಡಾ. ಸ.ಜ. ನಾಗಲೋಟಿಮಠ

ಡಾ. ನಾಗಲೋಟಿಮಠ ಕರ್ನಾಟಕದ ವೈದ್ಯಕೀಯ ಕ್ಷೇತ್ರದಲ್ಲಿ ದೊಡ್ಡ ಹೆಸರು. ನಾಡಿನ ದೇಶದ ದೊಡ್ಡ ಪೆಥಾಲಜಿಸ್ಟ್ ಆಗಿ, ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಬುದ್ಧಿ ಮತ್ತು ಅಪೂರ್ವ ಸಂಶೋಧನೆಗಳಿಂದ ಗಮನಾರ್ಹ ಸಾಧನೆ ಮಾಡಿ ತೋರಿದವರು. ಒಳ್ಳೆಯ ವೈದ್ಯ ಶಿಕ್ಷಕರಾಗಿ, ಆಡಳಿತಾಧಿಕಾರಿಯಾಗಿ ತಮ್ಮ ನಿಷ್ಠೆ, ಶ್ರದ್ಧಾಪೂರ್ವಕ ದುಡಿಮೆಯಿಂದ ವೈದ್ಯವೃತ್ತಿಗೆ ಗೌರವ ತಂದವರು. ಮೇಲಾಗಿ ಓರ್ವ ಒಳ್ಳೆಯ ವ್ಯಕ್ತಿ. ಸಜ್ಜನ. ಸಾಮಾನ್ಯರೊಳಗೆ ಸಾಮಾನ್ಯರಾಗಿ ಬದುಕುತ್ತಿರುವ ಡಾ. ನಾಗಲೋಟಿಯವರು ಸ್ವಪ್ರಯತ್ನ, ಸ್ವಾವಲಂಬನೆಗಳಿಂದ ಅರಳಿದವರು. ಜೀವನ ಕುಸುಮವನ್ನು ಪರಿಮಳಿಸಿದವರು. ಸ್ವಾಭಿಮಾನದ ಶುದ್ಧಬಂಗಾರ. ಅದರಿಂದಾಗಿ ಎದುರಾದ ಅಡ್ಡಿ, ಆತಂಕ, ಆಚರಣೆ, ವಿರೋಧ ಮತ್ತು ಅನಾಹುತಗಳನ್ನು ಅರಗಿಸಿಕೊಂಡು ಛಲಬಿಡದ ಶರಣನಂತೆ ಶ್ರೀಯುತರು ರೂಪುಗೊಂಡುದು ವಿಸ್ಮಯಸಿರಿ.

ದಿನಾಂಕ ೨೦.೭.೧೯೪೦ರಲ್ಲಿ ಗದಗದಲ್ಲಿ ಹುಟ್ಟಿ; ಬಾಗಲಕೋಟೆ ಜಿಲ್ಲೆ ಬನಹಟ್ಟಿಯಲ್ಲಿ ಬೆಳೆದು ಅಲ್ಲಿನ ಎಸ್.ಆರ್.ಎ. ಹೈಸ್ಕೂಲ, ಹುಬ್ಬಳ್ಳಿಯ ಪಿ.ಸಿ. ಜಾಬೀನ್ ಸೈನ್ಸ್ ಕಾಲೇಜು, ಕರ್ನಾಟಕ ಮೆಡಿಕಲ್ ಕಾಲೇಜುಗಳಲ್ಲಿ ಅಭ್ಯಾಸಮಾಡಿ, ೧೯೬೫ರಲ್ಲಿ ಎಂ.ಬಿ.ಬಿ.ಎಸ್. ಅನ್ನು, ೧೯೬೮ರಲ್ಲಿ ಡಿ.ಸಿ.ಪಿ.ಯನ್ನು, ೧೯೭೦ರಲ್ಲಿ ಎಂ.ಡಿ.ಯನ್ನು, ೧೯೯೪ರಲ್ಲಿ ಎಫ್.ಅಯ್.ಸಿ. (ಪ್ಯಾಥ)ಯನ್ನು ತಮ್ಮದಾಗಿಸಿಕೊಂಡ ಶ್ರೀ ನಾಗಲೋಟಿಮಠರು ೧೯೬೭ರಿಂದ ೧೯೭೦ರವರೆಗೆ ಕೆ.ಎಂ.ಸಿ.ಯಲ್ಲಿ ಉಪನ್ಯಾಸಕರಾಗಿ, ೧೯೭೧ ರಿಂದ ೧೯೭೩ರವರೆಗೆ ಜೆ.ಎನ್.ಎಮ್.ಸಿ.ಯಲ್ಲಿ ಉಪಪ್ರಾಧ್ಯಾಪಕರಾಗಿ, ೧೯೭೪ ರಿಂದ ೧೯೯೧ರವರೆಗೆ ಅಲ್ಲಿಯೇ ಪ್ರಾಧ್ಯಾಪಕ ಮತ್ತು ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದರು. ಶ್ರೀಯುತರ ವಿದ್ವತ್ತು, ನೈಪುಣ್ಯತೆ ಮತ್ತು ವ್ಯಕ್ತಿತ್ವದ ಎತ್ತರವನ್ನು ಗಮನಿಸಿದ ಬಿಜಾಪುರದ ಪ್ರತಿಷ್ಠಿತ ಬಿ.ಎಲ್.ಡಿ.ಇ. ವೈದ್ಯಕೀಯ ಕಾಲೇಜು, ಡಾ. ನಾಗಲೋಟಿಮಠರನ್ನು ೧೯೯೧-೧೯೯೩ರವರೆಗೆ ಪ್ರಿನ್ಸಿಪಾಲರನ್ನಾಗಿ ನೇಮಿಸಿಕೊಳ್ಳುವುದರ ಮೂಲಕ ತನ್ನ ಘನತೆಗೆ ಗರಿಮೂಡಿಸಿಕೊಂಡಿತು. ಅನಂತರ ೧೯೯೪-೧೯೯೫ರಲ್ಲಿ ಶ್ರೀಯುತರು ಮೈಸೂರಿನ ಸುಪ್ರಸಿದ್ಧ ಜೆ.ಎಸ್.ಎಸ್. ವೈದ್ಯಕೀಯ ಕಾಲೇಜಿನ ಪ್ರಿನ್ಸಿಪಾಲರಾಗಿ ಹಾಗೂ ನಿರ್ದೇಶಕರಾಗಿ ಸಲ್ಲಿಸಿದ ಸೇವೆ ಅವಿಸ್ಮರಣೀಯವಾದುದು. ೧೯೯೬ ರಿಂದ ೧೯೯೭ರವರೆಗೆ ಹುಬ್ಬಳ್ಳಿಯ ಕಿಮ್ಸ್ ಸಂಸ್ಥೆಯ ನಿರ್ದೇಶಕರಾಗಿ, ೧೯೯೯ ರಿಂದ ೨೦೦೩ರವರೆಗೆ ಬಾಗಲಕೋಟೆಯ ಎಸ್.ಎನ್. ವೈದ್ಯಕೀಯ ಮಹಾವಿದ್ಯಾಲಯದ ನಿರ್ದೇಶಕರಾಗಿ ಅನುಪಮ ಸೇವೆ ಸಲ್ಲಿಸಿದರು.

ಡಾ. ನಾಗಲೋಟಿಮಠರು ನಾರುಹುಣ್ಣು, ಬ್ರುಸೆಲ್ಲಾರೋಗ, ಡಯಾಬಿಟೀಸ್, ಪರಾನ್ನ ಜೀವಿರೋಗ, ಸೈಟೋಲಜಿ, ಕ್ಯಾನ್ಸರ್ ಮುಂತಾದ ರೋಗಗಳ ಸಂಶೋಧನೆ ಮಾಡಿದ್ದಾರೆ. ಏಷ್ಯಾದಲ್ಲಿಯೇ ಅತ್ಯುನ್ನತವಾದ ಮ್ಯೂಜಿಯಂ ಅನ್ನು ಜೆ.ಎನ್. ಮೆಡಿಕಲ್ ಕಾಲೇಜಿನಲ್ಲಿ ಸ್ಥಾಪಿಸಿದ್ದಾರೆ. ಬಿ.ಎಲ್.ಡಿ.ಇ. ಕಾಲೇಜಿನಲ್ಲಿ ಅತಿದೊಡ್ಡದಾದ ದೇಹದ ಹರಳು ಮ್ಯೂಜಿಯಂನ್ನು ತೆರೆದಿದ್ದಾರೆ. ಪ್ಲಾಸ್ಟಿನೇಷನ್ ಕಲೆಯಲ್ಲಿ ನೈಪುಣ್ಯತೆಯನ್ನು ಸಾಧಿಸಿದ್ದಾರೆ.

ಶ್ರೀಯುತರು ಶ್ರೇಷ್ಠ ಬರಹಗಾರರು. ೧೨೦ಕ್ಕೂ ಹೆಚ್ಚು ವೈಜ್ಞಾನಿಕ ಲೇಖನಗಳನ್ನು, ೪೨ ಕನ್ನಡ ಗ್ರಂಥಗಳನ್ನು, ೧೬ ಇಂಗ್ಲೀಷ್ ಕೃತಿಗಳನ್ನು ಪ್ರಕಟಿಸಿದ್ದು ಅವುಗಳಲ್ಲಿ ಕೆಲವು ಕನ್ನಡ ಸಾಹಿತ್ಯ ಅಕಾಡೆಮಿ, ಆರ್.ಎಲ್. ನರಸಿಂಹಯ್ಯ ಬಹುಮಾನಗಳನ್ನು ಪಡೆದಿರುವುದು ಹೆಮ್ಮೆಯನ್ನುಂಟುಮಾಡುವುದಾಗಿದೆ. ಒಂದು ಗ್ರಂಥ ಅಮೇರಿಕದಲ್ಲಿ, ಒಂದು ಗ್ರಂಥ ಸ್ವೀಡನ್ನಿನಲ್ಲಿ ಪ್ರಕಟವಾಗಿವೆ. ಇಂಡಿಯನ್ ಟೆಕ್ಸ್ಟ್‌ಬುಕ್ ಆಫ್ ಪೆಥಾಲಜಿಯ ಸಂಪಾದಕರೂ ಆಗಿರುವ ಡಾ. ಮಠ ಅವರು ಅಲಂಕರಿಸಿದ ಹುದ್ದೆಗಳು ಹಲವಾರು. ಅಲಂಕರಿಸಿದ ಹುದ್ದೆಗಳಿಗೆಲ್ಲ ಘನತೆ ಗೌರವಗಳ ಬೆಳಕನ್ನು ಮೂಡಿಸಿದ ಹೆಗ್ಗಳಿಕೆ. ರಾಷ್ಟ್ರೀಯ ಪೆಥಾಲಜಿ ಸಂಘದ ಕಾರ್ಯದರ್ಶಿ ಹಾಗೂ ಅಧ್ಯಕ್ಷರಾಗಿ, ಇಂಡಿಯನ್ ಮೆಡಿಕಲ್ ಕೌನ್ಸಿಲ್‌ನ ಸದಸ್ಯರಾಗಿ, ಇಂಡಿಯನ್ ಜರ್ನಲ್ ಆಫ್ ಪೆಥಾಲಜಿ ಅಂಡ್ ಮೈಕ್ರೊಬಯೋಲಜಿಯ ಸಂಪಾದಕರಾಗಿ, ಇಂಡಿಯನ್ ಜನರಲ್ ಆಫ್ ಸೈಟೋಲಜಿ ಜೀವನಾಡಿ ಆರೋಗ್ಯ ಮಾಸಪತ್ರಿಕೆಯ ಸಂಪಾದಕರಾಗಿ, ಮೂರು ಅವಧಿಗೆ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಅಧ್ಯಕ್ಷರಾಗಿ, ಚಂದಿಗಡ, ಕಲ್ಕತ್ತಾ, ಬನಾರಸ, ಪಾಂಡಿಚೆರಿ, ಉದಯಪುರ ಮತ್ತು ಅಮೇರಿಕೆಯ ಬೋಸ್ಟನ್ ಬಾಲ್ಟಿಮೋರ ವಿಶ್ವವಿದ್ಯಾಲಯಗಳ ಗೌರವ ಪ್ರಾಧ್ಯಾಪಕರಾಗಿ, ಇಂಡಿಯನ್ ಕಾಲೇಜ್ ಆಫ್ ಪೆಥಾಲಜಿಸ್ಟ್‌ದ ಡೀನ್ ಆಗಿ ವಹಿಸಿಕೊಂಡ ಎಲ್ಲ ಹುದ್ದೆಗಳ ಯಶೋವೈಭವಕ್ಕೆ ಕಾರಣರಾಗಿದ್ದಾರೆ.

ಶ್ರೀ ನಾಗಲೋಟಿಮಠರ ಸೇವೆಗೆ ಸಂದಿರುವ ರಾಷ್ಟ್ರೀಯ ಮತ್ತು ರಾಜ್ಯಪ್ರಶಸ್ತಿಗಳ ಪಟ್ಟಿ ಸುದೀರ್ಘವಾದುದು. ಅವುಗಳಲ್ಲಿ ಕೆಲವು ಇಂತಿವೆ. ೧೯೮೬ರಲ್ಲಿ ದೆಹಲಿಯ ಹರಿಓಂ ಆಶ್ರಮ ಅಲೆಂಬಿಕ-ಸಂಶೋಧನಾ ರಾಷ್ಟ್ರೀಯ ಪ್ರಶಸ್ತಿ, ೧೯೮೯ರಲ್ಲಿ ದೆಹಲಿಯ ಡಾ. ಬಿ.ಸಿ. ರಾಯ್ ರಾಷ್ಟ್ರೀಯ ಪ್ರಶಸ್ತಿ (ಮ್ಯೂಜಿಯಂ ಕಾರ್ಯಕ್ಕೆ) ೧೯೯೩ರಲ್ಲಿ ಕಟಕದ ಡಾ. ಬಿ.ಕೆ. ಆಯಕಟ್ ರಾಷ್ಟ್ರೀಯ ಪ್ರಶಸ್ತಿ, ೧೯೯೬ರಲ್ಲಿ ಬೆಂಗಳೂರಿನ ಡಾ. ಎಸ್.ಎಲ್. ಭಾಟಿಯಾ ಪ್ರಶಸ್ತಿ, ೧೯೯೬ರಲ್ಲಿ ಲಖನೌದ ಡಾ. ವ್ಹಿ.ಎಸ್. ಮಾಂಗಲಿಕ ಪ್ರಶಸ್ತಿ, ೧೯೯೪ರಲ್ಲಿ ದೆಹಲಿಯ ಎಮಿನೆಂಟ್ ಸಿಟಿಜನ್ ಆಫ್ ಇಂಡಿಯಾ ಪ್ರಶಸ್ತಿ, ೧೯೯೬ರಲ್ಲಿ ದೆಹಲಿಯ 'ಅತಿವಿಶಿಷ್ಟ ಚಿಕಿತ್ಸಕ್' ಪ್ರಶಸ್ತಿಗಳು ಡಾ. ನಾಗಲೋಟಿಮಠರನ್ನು ಅಲಂಕರಿಸಿವೆ. ಅಂತೆಯೇ ರಾಜ್ಯಮಟ್ಟದ ಪ್ರಶಸ್ತಿಗಳಾದ – ೧೯೯೪ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಬೆಂಗಳೂರಿನ ಕೆ. ಷಡಕ್ಷರಪ್ಪ ಪ್ರಶಸ್ತಿ, ಡಾ. ರಾಮಪ್ರಸಾದ, ಡಾ. ಪಾರ್ಥಸಾರಥಿ ಪ್ರಶಸ್ತಿ, ಶಿವಮೊಗ್ಗದ ಡಾ. ಶ್ಯಾಮರಾವ್ ಪ್ರಶಸ್ತಿ, ಬಳ್ಳಾರಿಯ ಡಾ. ಪ್ಯಾಟಿ ಶ್ರೀನಿವಾಸಾಚಾರ್ ಪ್ರಶಸ್ತಿ, ಬೆಂಗಳೂರಿನ ಡಾ. ಗೋವಿಂದ ಶೆಟ್ಟಿ ಪ್ರಶಸ್ತಿ, ಕರ್ನಾಟಕ ಅಯ್.ಎಮ್.ಎ. ಎಂಡೋಮೆಂಟ್ ಪ್ರಶಸ್ತಿಗಳಿಂದ ಗೌರವಿಸಲ್ಪಟ್ಟಿದ್ದಾರೆ.

ಕರ್ನಾಟಕದ ಮಠ ಮಾನ್ಯಗಳಿಂದಲೂ ಆಶೀರ್ವದಿತರಾಗಿರುವ ಡಾ. ಮಠರು ಇಲಕಲ್ ಸಂಸ್ಥಾನದ ಪೂಜ್ಯ ಶ್ರೀ ಮಹಾಂತಸ್ವಾಮಿಗಳಿಂದ ಬಸವಗುರು ಕಾರುಣ್ಯಪ್ರಶಸ್ತಿ, ಕೊಟ್ಟೂರು ಜಗದ್ಗುರುಗಳು – ಹಾಲಕೆರೆಯವರಿಂದ ದೇಶಸೇವಾ ವಿಭೂಷಣ ಪ್ರಶಸ್ತಿ, ಬಾಳೆಹೊನ್ನೂರು ಜಗದ್ಗುರುಗಳಿಂದ ರೇಣುಕ ಪ್ರಶಸ್ತಿಗಳಿಂದ ಪುರಸ್ಕೃತರಾಗಿದ್ದಾರೆ.

ಪ್ರವಾಸಾನುಭವ ಪ್ರಬುದ್ಧರಾಗಿರುವ ಪ್ರಸನ್ನ ಚಿತ್ತದ ಡಾ. ನಾಗಲೋಟಿಮಠರು ಅಮೇರಿಕಾ, ಕೆನಡಾ, ಹಾಂಗ್‌ಕಾಂಗ್, ಚೀನಾ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಸ್ವಿಟ್ಜರ್‌ಲೆಂಡ್, ಆಸ್ಟ್ರಿಯಾ, ಇಟಲಿ, ಲಕ್ಸಂಬರ್ಗ್, ಸ್ಪೇನ್ ಸಂದರ್ಶಿಸಿ ಆಯಾ ಜನಜೀವನವನ್ನು ಅರಿತ ''ಶರಣಸಿರಿ'' ಎನಿಸಿದ್ದಾರೆ. ಅಲ್ಲಿನ ವಿಶೇಷಗಳನ್ನು ತಮ್ಮ ಆತ್ಮಕಥನ'', ''ಬಿಚ್ಚಿದ ಜೋಳಿಗೆ''ಯಲ್ಲಿ ತುಂಬಿ ಕೊಟ್ಟಿದ್ದಾರೆ.

''ಕೂಡಲಸಂಗನ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರ''. ಬಸವಣ್ಣನವರ ವಚನವನ್ನು ಅಕ್ಷರಶಃ ಆಚರಣೆಯಲ್ಲಿಟ್ಟುಕೊಂಡಿರುವ ಡಾ. ನಾಗಲೋಟಿಮಠರು ವಿಭೂತಿ ಪ್ರಿಯರು. ವಿಭೂತಿ ಲಾಂಛನಕ್ಕೆ ಜೀವಾಳವೆನಿಸಿದ ವಿನಯ ಸಮುದ್ರರು. ಸರಳಜೀವನ ಉನ್ನತ ಚಿಂತನದ ಚೊಕ್ಕಟ ಚಿನ್ನ. ಶ್ರೀಮಠದೊಡನೆ ಭಕ್ತಿಬಾಂಧವ್ಯವನ್ನು ಬೆಳೆಸಿಕೊಂಡು ಬಂದಿರುವವರು. 'ಬಡಮಕ್ಕಳಿಗೆ ಗುಡಿಕಟ್ಟಿಸಿದ ಪೂಜ್ಯರು ಶ್ರೀಗಳು' ಎಂದು ವಜ್ರಮಹೋತ್ಸವದ ಸ್ಮಾರಕ ವಿದ್ಯಾರ್ಥಿನಿಲಯವನ್ನು ಕಂಡು ಭಕ್ತಿನುಡಿಗಳನ್ನರ್ಪಿಸಿದ ಸುಸಂಸ್ಕೃತರು. ಶ್ರೀ ಸಿದ್ಧಗಂಗಾಮಠದ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಹಾಗೂ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯಲ್ಲಿರುವ ಸಮಸ್ತ ಸೇವಾಬಂಧುಗಳು ಶ್ರೀಯುತರನ್ನು ''ವಿಭೂತಿಪ್ರಿಯ''ರೆಂದು ಗೌರವಿಸಿ, ಶ್ರೀಮಠದ ಅಧ್ಯಕ್ಷರಾಗಿರುವ ದಾಸೋಹ ಸಾರ್ವಭೌಮರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೭ನೇ ಜನ್ಮದಿನೋತ್ಸವ ಗುರುವಂದನ ಪವಿತ್ರ ಸಮಾರಂಭದಲ್ಲಿ, ಬಸವಾದಿ ಪ್ರಮಥರು ಮತ್ತು ಶ್ರೀ ಸಿದ್ಧಗಂಗಾ ಗುರುಪರಂಪರೆ ಡಾ. ಸ.ಜ. ನಾಗಲೋಟಿಮಠರಿಗೆ ಸಕಲ ಸನ್ಮಂಗಳವನ್ನಿತ್ತು ಆಶೀರ್ವದಿಸಲಿ ಎಂದು ಪ್ರಾರ್ಥಿಸಿ ಸಮರ್ಪಿಸಿದ ಸನ್ಮಾನಪತ್ರ.





'ಶ್ರೀಪಾದ ನಿಲಯ'
ಸುಬ್ರಹ್ಮಣ್ಯ ದೇವಸ್ಥಾನದ ರಸ್ತೆ,
ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು – ೫೬೦ ೦೨೦.

## 'ಜಾನಪದ ಭೀಷ್ಮ'

## ಡಾ. ಎಚ್.ಎಲ್. ನಾಗೇಗೌಡ

''ಕನ್ನಡ ಸಾಹಿತ್ಯ ಮತ್ತು ಜಾನಪದ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಕನ್ನಡ ಸಾರಸ್ವತ ಲೋಕದ ಹಿರಿಯರಲ್ಲಿ ಒಬ್ಬರಾದ ಡಾ. ಎಚ್.ಎಲ್. ನಾಗೇಗೌಡರು'' ಹುಟ್ಟಿದ್ದು ಮಂಡ್ಯಜಿಲ್ಲೆ ನಾಗಮಂಗಲ ತಾಲ್ಲೂಕು ಹೆರಗನ ಹಳ್ಳಿಯಲ್ಲಿ; ೧೯೧೫ರ ಫೆಬ್ರವರಿ ೧೧ರಂದು. ಗೌಡರದು ದೊಡ್ಡಮನೆ. ಎಲ್ಲ ಅರ್ಥಗಳಲ್ಲಿಯೂ ದೊಡ್ಡಮನೆ. ಶ್ರೀಯುತರು ಬಿ.ಎಸ್‌ಸಿ ಮತ್ತು ಎಲ್.ಎಲ್.ಬಿ. ಪದವೀಧರರು. ೧೯೪೧ರಲ್ಲಿಯೇ ಮೈಸೂರು ಸಿವಿಲ್ ಸರ್ವಿಸ್ ಸ್ಪರ್ಧಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ಗೌಡರು ಗೆಜ್ಜೆಟೆಡ್ ಹುದ್ದೆಯಿಂದ ವೃತ್ತಿ ಜೀವನವನ್ನಾರಂಭಿಸಿ ರಾಜ್ಯದ ಲೋಕಸೇವಾ ಆಯೋಗದ ಸದಸ್ಯತ್ವದವರೆಗೂ ವಿವಿಧ ಹುದ್ದೆಗಳಲ್ಲಿ ಸೇವೆಸಲ್ಲಿಸಿ ೧೯೭೯ರಲ್ಲಿ ನಿವೃತ್ತರಾದನಂತರವೂ ಕ್ರಿಯಾ ಭಗೀರಥರಾಗಿ ನಾಡು ನುಡಿಯ ಸೇವೆಗೆ ಕಟಿಬದ್ಧರಾದದ್ದು ನಾಡಿನ ಪುಣ್ಯ. ಜಾನಪದಕ್ಷೇತ್ರಕ್ಕೆ ಒದಗಿಬಂದ ಭಾಗ್ಯ. 'ಸಾಹಿತ್ಯ ಮತ್ತು ಜಾನಪದ ಏಳಿಗೆಗೆ ಬದುಕನ್ನು ಮುಡುಪಾಗಿರಿಸಿದ ಅಪರೂಪದ ಚೇತನ'.

ಡಾ. ನಾಗೇಗೌಡರ ಲೋಕಾನುಭವದ ವ್ಯಾಪ್ತಿ ದೊಡ್ಡದು. ಸದಭಿರುಚಿಯುಳ್ಳದ್ದು. ಅವರಲ್ಲಿನ ಸಾಹಿತ್ಯಪ್ರತಿಭೆ 'ನಾನಾಗುವೆ ಗೀಜಗನ ಹಕ್ಕಿ ಕಥೆ-ವ್ಯಥೆ, ಮಲೆನಾಡಿನ ವಾಲ್ಮೀಕಿ, ನನ್ನೂರು, ದೊಡ್ಡಮನೆ, ಸೊನ್ನೆಯಿಂದ ಸೊನ್ನೆಗೆ, ಭೂಮಿಗೆ ಬಂದ ಗಂಧರ್ವ, ಸರೋಜಿನೀ ದೇವಿ, ಬೆಟ್ಟದಿಂದ ಬಟ್ಟಲಿಗೆ (ಕಾಫಿಯ ಕಥೆ) ಕೃತಿಗಳಾಗಿ ಹೊರಹೊಮ್ಮಿದ್ದು ಸಾಹಿತ್ಯಲೋಕದ ಸಿರಿಗೆ ತೆರೆದ ಬೆಳಕಿನ ದಾರಿ. ಶ್ರೀಯುತರು ಒಳ್ಳೆಯ ಅನುವಾದಕರೆಂಬುದನ್ನು ಅವರು ಇಂಗ್ಲೀಷ್‌ನಿಂದ ಕನ್ನಡಕ್ಕೆ ತಂದ 'ಕೆನಿಲ್‌ವರ್ತ್' 'ಪ್ರವಾಸಿ ಕಂಡ ಇಂಡಿಯಾ'ಗಳು ಸಮರ್ಥಿಸುತ್ತವೆ. ರಾಷ್ಟ್ರಕವಿ ಕುವೆಂಪುರವರು 'ಪ್ರವಾಸಿಕಂಡ ಇಂಡಿಯಾ'ದ ಬಗ್ಗೆ ಮೆಚ್ಚುನುಡಿಯನ್ನು ವ್ಯಕ್ತಪಡಿಸಿದ್ದು ಶ್ರೀ ನಾಗೇಗೌಡರ ಅನುವಾದನವಿದ್ವತ್ತನ್ನು ವಿದ್ವಜ್ಜನರು ಗಮನಿಸುವಂತೆ ಮಾಡಿದ್ದಾರೆ. ''ಯಾವ ಭಾಷೆಯಲ್ಲೂ ಇಲ್ಲದ ಬೃಹತ್ ಆತ್ಮಕಥೆ'' 'ನಾಗಸಿರಿ' ಪ್ರಾಮಾಣಿಕತೆ ನಿರೂಪಣೆಯ ಸುಂದರ ಕೃತಿ ೨೫೦೦ ಪುಟಗಳನ್ನುಳ್ಳದ್ದಾಗಿದೆ.

ಡಾ. ನಾಗೇಗೌಡರ ಅರಿವು-ಅನುಭವ-ಪ್ರತಿಭೆಗಳು ತ್ರಿವೇಣಿಯಾಗಿ ಹರಿದದ್ದು ಜಾನಪದ ಸಿರಿಭೂಮಿಯಲ್ಲಿ. ಶ್ರೀಯುತರು ಜಾನಪದ ಸಂಗ್ರಾಹಕರಾಗಿ, ಸಂಶೋಧಕರಾಗಿ ಅವಿಸ್ಮರಣೀಯ ಸೇವೆಸಲ್ಲಿಸಿದ್ದಾರೆ. ಸೋಬಾನೆ ಚಿಕ್ಕಮ್ಮನ ಪದಗಳು, ಪದವವೆ ನಮ್ಮ ಎದೆಯಲ್ಲಿ, ಹೆಳವರು ಮತ್ತು ಅವರ ಕಾವ್ಯಗಳು, ದುಂಡು ಮಲ್ಲಿಗೆ ಹೂಬುಟ್ಟೀಲಿ ಬಂದಾವ – ಈ ಒಂದೊಂದೂ ಜಾನಪದ ಕೃತಿಗಳು ವಿಶಿಷ್ಟವಾದುವು; ಅನನ್ಯ ಕೊಡುಗೆಯಾದುವು. ''ಎಸೆನ್ಷಿಯಲ್ ಆಫ್ ಕರ್ನಾಟಕ ಫೋಕ್ ಲೋರ್' ಕನ್ನಡೇತರ ಜಗತ್ತಿಗೆ ಕನ್ನಡ ಜಾನಪದ ಸಿರಿಯನ್ನು ಪರಿಚಯಿಸುವ ಸುಂದರ ಕೃತಿ. 'ಕನ್ನಡ ಜಾನಪದ ಕೋಶ' ಜಾನಪದಕ್ಕೆ ಮೀಸಲಾದ ನಿಘಂಟು. 'ಮಲೆನಾಡ ವಾಲ್ಮೀಕಿ' ಕುವೆಂಪುರವರ ಭವ್ಯವ್ಯಕ್ತಿತ್ವಕ್ಕೆ ಮುಡಿಸಿದ ಕೃತಿ ಪುಷ್ಪ. ಶ್ರೀಯುತರದು ಆಡಂಬರವಿಲ್ಲದ ನಿರಾಳ ಶೈಲಿ. ಪರಿಪಕ್ವ ಅನುಭವದ ಉತ್ಕೃಷ್ಟ ಅಭಿವ್ಯಕ್ತಿ. ಡಾ. ಗೌಡರು ದೇಶತಿರುಗಿ ಗಳಿಸಿರುವ ಅನುಭವ ಶ್ರೀಮಂತವಾದುದು. 'ನಾಕಂಡ ಪ್ರಪಂಚ' ಪ್ರವಾಸಾನುಭವದ ರತ್ನಗಣಿ.

'ಜಾನಪದ ಜಗತ್ತು' ತ್ರೈಮಾಸಿಕದ ಮೂಲಕ ಶ್ರೀಯುತರು ೨೪ ವರ್ಷಗಳಿಂದ ಪತ್ರಿಕೋದ್ಯಮ ಕ್ಷೇತ್ರದಲ್ಲಿಯೂ ದುಡಿಯುತ್ತ ಬಂದಿದ್ದು ಜಾನಪದ ದಿಗಂತವನ್ನು ವಿಸ್ತಾರಗೊಳಿಸುತ್ತ ಮುನ್ನಡೆದಿದ್ದಾರೆ.

ಜಾನಪದ ಸಂರಕ್ಷಣೆ, ಸಂವರ್ಧನೆ, ಪ್ರಚಾರಗಳನ್ನು ಪ್ರಧಾನ ಆಶಯಗಳನ್ನಾಗಿರಿಸಿಕೊಂಡು ೧೯೭೯ರಲ್ಲಿ ಕರ್ನಾಟಕ ಜಾನಪದ ಪರಿಷತ್ತು (ಟ್ರಸ್ಟ್) ಸ್ಥಾಪಿಸಿ ಜಾನಪದ ಚಟುವಟಿಕೆಗಳಿಗೆ ನಾಂದಿ ಹಾಡುವಂತೆ ಮಾಡಿದ್ದಾರೆ. ೨೦೦೦ ಗಂಟೆಗಳಷ್ಟು ಹಾಡುವ ಧ್ವನಿಸುರುಳಿಗಳು, ೮೦೦ ಗಂಟೆಗಳಷ್ಟು ಕಾಲ ನೋಡುವ ವಿಡಿಯೋಗಳು, ಒಂದು ಸಾವಿರಕ್ಕೂ ಹೆಚ್ಚು ವರ್ಣಪಾರದರ್ಶಿಕೆಗಳು ಡಾ. ಗೌಡರ ಜಾನಪದ ಭಂಡಾರದಲ್ಲಿವೆ. ದೂರದರ್ಶನದಲ್ಲಿ ಮೂಡಿಬಂದ 'ಸಿರಿಗಂಧ' ಜಾನಪದ ಸಾಕ್ಷ್ಯಚಿತ್ರ ಸರ್ವ ಜನಪ್ರಿಯವಾದದ್ದು ಈಗ ನೆನಪಿನ ದೀಪ.

ಡಾ. ನಾಗೇಗೌಡರ ಜೀವಿತಾವಧಿಯ ಅದ್ಭುತವೆಂದರೆ ಅವರು ರೂಪಿಸಿದ ಗ್ರಾಮ ಕರ್ನಾಟಕ ದರ್ಶನವಾಗಿರುವ 'ಜಾನಪದಲೋಕ' ಬೆಂಗಳೂರು, ಮೈಸೂರು ಮಾರ್ಗಮಧ್ಯದಲ್ಲಿ ರಾಮನಗರದ ಬಳಿ ಕೈಬೀಸಿ ಕರೆಯುವ ೧೫ ಎಕರೆ ವಿಸ್ತಾರದಲ್ಲಿ ಬೆಳೆದುನಿಂತಿರುವ ಮಹತ್ವ ಸಾಂಸ್ಕೃತಿಕ ಕೇಂದ್ರ. ಶ್ರೀಯುತರ ಹೆಸರನ್ನು ಚಿರಂತನವಾಗಿಸಿದ ಅಪರೂಪದ ಜಾನಪದವನ್ನು ಜೀವಂತವಾಗಿರಿಸಿರುವ ಭುವನಸಿರಿ. ವರ್ಷದುದ್ದಕ್ಕೂ ಕಮ್ಮಟ, ಶಿಬಿರ, ಸ್ಪರ್ಧೆಗಳನ್ನು ನಡೆಸಿಕೊಂಡು ಬರುತ್ತಿರುವ ಜಾನಪದಲೋಕ, ಎಲೆಮರೆಯ ಅಮೂಲ್ಯ ಪ್ರತಿಭೆಗಳನ್ನು ಗುರುತಿಸಿ ಗೌರವಿಸುತ್ತ ಸತ್ಪರಂಪರೆಯನ್ನು ಸೋಬಾನೆ ಚಿಕ್ಕಮ್ಮ ಪ್ರಶಸ್ತಿ, ದೊಡ್ಡಮನೆ ಪ್ರಶಸ್ತಿ, ದೊಡ್ಡಮನೆ ಲಿಂಗೇಗೌಡ ಪ್ರಶಸ್ತಿ, ಜಾನಪದಲೋಕ ಪ್ರಶಸ್ತಿಗಳ ಮೂಲಕ ಮುಂದುವರಿಸಿದೆ.

ಡಾ. ನಾಗೇಗೌಡರು ದಕ್ಷತೆಗೆ, ದೂರದೃಷ್ಟಿಗೆ, ಸಾಹಿತ್ಯಕ್ಕೆ, ಜಾನಪದಕ್ಕೆ ಸಲ್ಲಿಸಿದ ಸೇವೆಗಾಗಿ ಸಂದಿರುವ ಪ್ರಶಸ್ತಿ ಪುರಸ್ಕಾರಗಳು ಹಲವಾರು. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಅಖಿಲ ಭಾರತ ೬೪ನೆಯ ಕನ್ನಡ ಸಾಹಿತ್ಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಗೌರವ, ವಿಧಾನಪರಿಷತ್ತಿನ ಸದಸ್ಯತ್ವದ ಗೌರವ ಮತ್ತು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಪ್ರತಿಷ್ಠಿತ ನಾಡೋಜ ಪ್ರಶಸ್ತಿಗಳು ಶ್ರೀಯುತರನ್ನು ಅಲಂಕರಿಸಿವೆ.

ಡಾ. ಹೆಚ್.ಎಲ್. ನಾಗೇಗೌಡರ ಈ ಅಸೀಮ ಹಾಗೂ ಅನುಪಮ ಸೇವಾ ಶ್ರೀಮಂತಿಕೆಯನ್ನು ಮನಗಂಡ ಶ್ರೀ ಸಿದ್ಧಗಂಗಾ ಮಠದ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಶ್ರೀಮಠದ ವಿದ್ಯಾಸಂಸ್ಥೆಯಲ್ಲಿ ಸೇವಾಮುಖಿಗಳಾಗಿರುವ ಸಮಸ್ತ ಸಿಬ್ಬಂದಿ ನಮ್ರರು, ಶ್ರೀಮಠದ ಅಧ್ಯಕ್ಷರಾಗಿರುವ, ನಡೆದಾಡುವ ದೇವರೆಂದೇ ಜನಮನದಲ್ಲಿ ಬೆಳಗುತ್ತಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೭ನೇ ಜನ್ಮದಿನೋತ್ಸವ ಗುರುವಂದನ ಪವಿತ್ರ ಸಮಾರಂಭದಲ್ಲಿ ಡಾ. ಗೌಡರನ್ನು 'ಜಾನಪದ ಭೀಷ್ಮ' ಎಂದು ಗೌರವಿಸುತ್ತ, ಬಸವಾದಿ ಶರಣರು ಮತ್ತು ಶ್ರೀ ಸಿದ್ಧಗಂಗಾ ಗುರುಪರಂಪರೆ ಶ್ರೀಯುತರಿಗೆ ಸಕಲಸನ್ಮಂಗಳವನಿತ್ತು ಆಶೀರ್ವದಿಸಲಿ ಎಂದು ಪ್ರಾರ್ಥಿಸಿ ನೀಡಿದ ಸನ್ಮಾನ ಪತ್ರ.

---

ನಂ. ೭೪೩, ೧೨ನೆಯ ಮುಖ್ಯರಸ್ತೆ,
೩ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦ ೦೧೦.

---

## 'ಸಂಶೋಧಕ ಶಿವರತ್ನ'
## ಪ್ರೊ. ಎನ್. ಬಸವಾರಾಧ್ಯ

ನಂಜುಂಡಾರಾಧ್ಯ ಬಸವಾರಾಧ್ಯರು ಕನ್ನಡ ಸಾಹಿತ್ಯದ ಧೀಮಂತ ಪರಿಶೋಧಕರು. ನಮ್ಮ ಮಧ್ಯೆ ಉಳಿದಿರುವ ಹಳಗನ್ನಡ ಸಾಹಿತ್ಯದ ಅಪರೂಪ ವಿದ್ವಾಂಸರಲ್ಲಿ ಒಬ್ಬರು.

ಕುವೆಂಪು, ಡಿ.ಎಲ್.ಎನ್. ಎ.ಆರ್.ಕೃ ತೀ.ನಂ.ಶ್ರೀ., ಕ.ವೆಂ. ರಾಘವಾಚಾರ್, ಜಿ.ಪಿ. ರಾಜರತ್ನಂ ಅವರ ಸಾಧನೆ ಸಾಮರ್ಥ್ಯ ಸಂಪಾದಿಸಿರುವ ಇವರು ಕಿಟೆಲ್ಲರಂಥ ಆದ್ಯರ ಪಂಕ್ತಿಯಲ್ಲಿ ಸ್ಥಾನ ಪಡೆದಿರುತ್ತಾರೆ.

ಹಳಗನ್ನಡ ಸಾಹಿತ್ಯ ಕೃತಿಗಳ ಸಂಪಾದಕರಾಗಿ, ನಿಘಂಟು ರಚನಕಾರರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಶ್ರೀಯುತರು ಸಲ್ಲಿಸಿರುವ ಸೇವೆ ಬಹುಕಾಲ ನಿಲ್ಲುವಂತಹುದು. ಪ್ರಮುಖವಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ದೇವರಾಜ ಬಹದ್ದೂರ್ ಸಾಹಿತ್ಯ ಪ್ರಶಸ್ತಿ ಮುಂತಾದ ಬಹುಮಾನ ಗಳಿಂದ ಪುರಸ್ಕೃತರಾಗಿದ್ದಾರೆ.

ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ನಾರಸಿಂಹನಹಳ್ಳಿಯಲ್ಲಿ ದಿನಾಂಕ ೨೦.೨.೧೯೨೬ರಲ್ಲಿ ಇವರ ಜನನ. ತಂದೆ ಶ್ರೀ ನಂಜುಂಡಾರಾಧ್ಯರು, ತಾಯಿ ಶ್ರೀಮತಿ ಗಿರಿಜಮ್ಮ. ಕಡುಬಡತನದಲ್ಲಿಯೇ ಬೆಳೆದುಬಂದ ಶ್ರೀ ಬಸವಾರಾಧ್ಯರು ಕೋಲಾರದಂಥ ದೂರದ ಪ್ರದೇಶದಿಂದ ರಾಜಧಾನಿ ಮೈಸೂರನ್ನು ಮುಟ್ಟಿ ಬೆಳೆದು ನಿಲ್ಲುವಲ್ಲಿ ಶ್ರೀಯುತರಲ್ಲಿದ್ದ ಶ್ರದ್ಧೆ, ವಿನಯ, ಛಲ ನೆರವಾದವು.

ಕನ್ನಡ, ಸಂಸ್ಕೃತ, ಇಂಗ್ಲೀಷ್, ತೆಲುಗು, ಹಿಂದಿ, ತಮಿಳು ಭಾಷೆಗಳಲ್ಲಿ ವ್ಯವಹರಿಸಬಲ್ಲ ಶ್ರೀ ಆರಾಧ್ಯರು ೧೯೫೦ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ಮುಗಿಸಿ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ತಮ್ಮ ವೃತ್ತಿ ಜೀವನ ಆರಂಭಿಸಿದರು.



೧೯೫೫ರಲ್ಲಿ ಬೆಂಗಳೂರನ್ನು ತಲುಪಿ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಯೋಜನೆಯಲ್ಲಿ ಮುಖ್ಯ ಸಂಪಾದಕರಿಂದ ಪ್ರಧಾನ ಸಂಪಾದಕರವರೆಗೆ ಸೇವೆ ಸಲ್ಲಿಸಿ ಕನ್ನಡಕ್ಕೊಂದು ಮಹತ್ವದ ನಿಘಂಟನ್ನು ನಿರ್ಮಿಸಿಕೊಟ್ಟ ಹೆಗ್ಗಳಿಕೆ.

೧೯೭೧ ರಿಂದ ೧೯೮೬ರ ವರೆಗೆ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯದಲ್ಲಿ ಸಂಪಾದನಾ ವಿಭಾಗದ ಉಪ ನಿರ್ದೇಶಕರಾಗಿ ಸೇವೆ ಸಲ್ಲಿಸಿ ವೃತ್ತಿಯಿಂದ ನಿವೃತ್ತ ರಾದರು. ೧೯೯೮ ರಿಂದ ೨೦೦೧ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ದಕ್ಷ ಹಾಗೂ ಪ್ರಾಮಾಣಿಕ ಸೇವೆ ಸಲ್ಲಿಸಿದ ಶ್ರೀ ಬಸವಾರಾಧ್ಯರಿಗೆ ಅಪಾರ ಜನಮೆಚ್ಚುಗೆ ದೊರೆಯಿತು. ಈ ಮುಖ್ಯ ಹೆಜ್ಜೆಗಳ ನಡುವೆ ಪಠ್ಯಪುಸ್ತಕ ಸಮಿತಿಗಳಲ್ಲಿ, ಪಿ.ಹೆಚ್‌ಡಿ., ಪ್ರಕಟಣೆಯ ಸಲಹೆಗಾರರಾಗಿ, ಬೆಂಗಳೂರು, ಮೈಸೂರು, ಕರ್ನಾಟಕ, ಕಾಮರಾಜ್ ವಿಶ್ವವಿದ್ಯಾಲಯಗಳಲ್ಲಿ ಕಾರ್ಯನಿರ್ವಹಿಸಿದರು.

ಬಿ. ಶಿವಮೂರ್ತಿ ಶಾಸ್ತ್ರಿ ಪ್ರತಿಷ್ಠಾನ, ಬಿ.ಎಂ.ಶ್ರೀ. ಪ್ರತಿಷ್ಠಾನ, ಗೋಖಲೆ ಇನ್‌ಸ್ಟಿಟ್ಯೂಟ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ – ಮುಂತಾದ ಸಂಘ ಸಂಸ್ಥೆಗಳಲ್ಲಿ ಸದಾ ಕಾರ್ಯತತ್ಪರರು. ಹೀಗೆ ತನ್ನ ಜೀವನದ ಉದ್ದಕ್ಕೂ ನಾಡು-ನುಡಿಯ ಭವ್ಯತೆಗೆ ಸದಾ ದುಡಿಯುತ್ತಾ ಬಂದಿರುವ ಮಹನೀಯರು ಶ್ರೀ ಆರಾಧ್ಯರು.

ಬಿ.ಎಂ. ಶ್ರೀಯವರ 'ಬೆಳೆಯೇನೊ ಸಾಕಾದಷ್ಟಿದೆ, ಕೊಯ್ಯುವವರೇ ಇಲ್ಲ' ಎನ್ನುವ ನುಡಿಮುತ್ತು ಶ್ರೀ ಬಸವಾರಾಧ್ಯ ರನ್ನು ಚಿಂತನೆಗೆ ತೊಡಗಿಸಿತು. ಕನ್ನಡ ಸಾಹಿತ್ಯ ಲೋಕದ ವಿಶೇಷ ಕಾವ್ಯ ಸಂಪತ್ತಿನ ಬೆಳೆಯನ್ನು ಚೆನ್ನಾಗಿಯೇ ಕಟಾವು ಮಾಡಿದರು. ಕಣಮಾಡಿ, ಜೆಳ್ಳನ್ನು ತೂರಿ, ಗಟ್ಟಿ ಕಾಳುಗಳನ್ನು ನಮಗೆ ನೀಡಿದ ಮಹನೀಯರು. 'ಅಂದು ಹಿಂದೆ ಗುರುವಿದ್ದ ಮುಂದೆ ಗುರಿಯಿತ್ತು' ಎಂಬ ರಾಷ್ಟ್ರಕವಿ ಕುವೆಂಪುರವರ ವಾಣಿಗೆ ಪ್ರತ್ಯಕ್ಷ ಸಾಕ್ಷಿ ಶ್ರೀ ಬಸವಾರಾಧ್ಯರ ವಿದ್ವತ್‌ಲೋಕ. ಇಡೀ ಜೀವನವನ್ನು ಸಂಶೋಧನಾ ಲೋಕಕ್ಕೆ ಮೀಸಲಿಟ್ಟ ನಮ್ಮ ನಾಡಿನ ಹಿರಿಯ ವಿದ್ವಾಂಸರು.

ಎಪ್ಪತ್ತೆಂಟು ವಸಂತಗಳನ್ನು ಕಂಡಿರುವ ಅಂಚಿನಲ್ಲಿರುವ ಶ್ರೀಯವರಿಗೆ ಪುಸ್ತಕಗಳೇ ಒಡನಾಡಿ. ಅವರು ಮನೆಯಲ್ಲಿ ೫೦೦೦ಕ್ಕೂ ಮಿಕ್ಕು ಪುಸ್ತಕಗಳನ್ನು ಕಾಪಾಡಿಕೊಂಡು, ಜೋಡಿಸಿಟ್ಟಿರುವ ರೀತಿ, ಮನೆಗೆ ಬಂದ ಸಾಹಿತ್ಯಾಭಿಮಾನಿಗಳಿಗೆ ಅವುಗಳನ್ನು ಪರಿಚಯಿಸುವ ಪರಿ – ಅವರಲ್ಲಿನ ಪುಸ್ತಕ ಪ್ರೇಮಕ್ಕೆ ಸಾಕ್ಷಿಯಾಗಿದೆ.

ಇವರ ಸಂಪಾದಿತ ಕೃತಿಗಳಲ್ಲಿ ಮೊದಲನೆಯದು 'ತೊರವೆ ರಾಮಾಯಣ', ಅಗ್ರಗಣ್ಯವಾದುದು 'ಹರಿಶ್ಚಂದ್ರ ಕಾವ್ಯ'. ಇಂದಿಗೂ ಬಹುಜನ ಮಾನ್ಯವಾಗಿರುವ ಆ ಕೃತಿಯನ್ನು ಸಂಪಾದಿಸುವಲ್ಲಿ ಅದರ ವಿದ್ವತ್ತು ಮಿಂಚಿದೆ. ೫೦ಕ್ಕೂ ಹೆಚ್ಚು ಕೃತಿಗಳನ್ನು ಸಂಪಾದನೆ ಮಾಡಿರುವ ಶ್ರೀ ಬಸವಾರಾಧ್ಯರ ಪರಿಶ್ರಮ ಎದ್ದುಕಾಣುವುದು ಅವರು ೧೯೮೦ರಲ್ಲಿ ಹೊರತಂದ 'ಆರಾಧ್ಯ ಚಾರಿತ್ರ್ಯ,' ಎಂಬ ಬೃಹತ್ ಗ್ರಂಥದಲ್ಲಿ. ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಮಹಾಸಂಗಮವನ್ನು ಈ ಕಾವ್ಯದಲ್ಲಿ ಕಾಣಬಹುದು.

೧೯೭೬ರಲ್ಲಿ ಪ್ರಕಟವಾದ ಹಳಗನ್ನಡ ನಿಘಂಟು ಇವರ ಮೇರು ಕೃತಿ. ರನ್ನ ಕಂದದಿಂದ ಹಿಡಿದು ಶಬ್ದಾರ್ಥಕೋಶದವರೆಗಿನ ಹತ್ತು ಪ್ರಾಚೀನ ಹಳಗನ್ನಡ ನಿಘಂಟುಗಳನ್ನು ಅವಲೋಕಿಸದ ಶಾಸ್ತ್ರೀಯ ಕೃತಿ. ಹಲವಾರು ಮೌಲಿಕ ಬಿಡಿ ಲೇಖನಗಳನ್ನು ವಿದ್ವತ್ ಪ್ರಪಂಚಕ್ಕೆ ನೀಡಿದ್ದಾರೆ. ಇವರ ಸಂಪಾದಿತ ಕೃತಿಗಳ ಮುನ್ನುಡಿಗಳ ಸಂಕಲನವೇ ಒಂದು ಮಹತ್ವದ ಗ್ರಂಥವಾಗುತ್ತದೆ.

ಎಪ್ಪತ್ತೆಂಟು ವಸಂತಗಳ ಬೇವು-ಬೆಲ್ಲವನ್ನು ಸವಿದಿರುವ ಶ್ರೀ ಬಸವಾರಾಧ್ಯರಿಗೆ ಎಲ್ಲವನ್ನೂ ಮಾಡಿ ಮುಗಿಸಿದೆನೆಂಬ ಗರ್ವವಿಲ್ಲ. ಅವರ ಪ್ರಕಾರ "ಕನ್ನಡ ನಿಘಂಟಿನ ಕ್ಷೇತ್ರ ಇನ್ನೂ ಪರಿಪೂರ್ಣವಾಗಿಲ್ಲ. ಇನ್ನೂ ಎಷ್ಟೋ ಕನ್ನಡದ ಕೃತಿಗಳು ಪ್ರಕಟವಾಗದೆ ನಾಡಿನಾದ್ಯಂತ ಹರಡಿಹೋಗಿವೆ. ಅವುಗಳ ಸಂಪಾದನೆಯಾಗಬೇಕು" ಎನ್ನುವ ಅವರ ಮಾತು ಈ ಕ್ಷೇತ್ರದಲ್ಲಿ ಕೆಲಸಮಾಡುವವರಿಗೆ ದಾರಿದೀಪವಾಗಿದೆ.

ಸಮಯ ಪಾಲನೆ, ಕರ್ತವ್ಯಪ್ರಜ್ಞೆ, ಅಚ್ಚುಕಟ್ಟುತನ ಅವರ ಜೀವನದ ಬಹುಮುಖ್ಯ ಗುಣಗಳಾಗಿವೆ. ಹಿರಿಯರಲ್ಲಿ ಗೌರವ, ಕಿರಿಯರಲ್ಲಿ ಪ್ರೀತಿ ವಿಶ್ವಾಸವನ್ನು ಹೊಂದಿದ ಶ್ರೀ ಬಸವಾರಾಧ್ಯರು ಸದಾ ನಗುನಗುತ್ತಾ ಕೆಲಸ ಮಾಡುವ, ಕೆಲಸ ಮಾಡಿಸುವ ಮನೋಧರ್ಮ ಉಳ್ಳವರು. ಸರಳ ಸಜ್ಜನಿಕೆ, ಹಾಸ್ಯಪ್ರಜ್ಞೆ, ನಿರ್ಮಲವಾದ ಅಂತಃಕರಣ, ಸ್ನೇಹಪರತೆ ಮೊದಲಾದ ಗುಣ ಗಳಿಂದಾಗಿ ಅವರು ಎಲ್ಲರಿಗೂ ಬೇಕಾದವರಾಗಿದ್ದಾರೆ. ಹಲವಾರು ಕಿರಿಯ ಸಂಶೋಧಕರಿಗೆ ಸ್ಫೂರ್ತಿ, ಸೌಜನ್ಯಪೂರ್ಣ ಮಾರ್ಗದರ್ಶನ ನೀಡಿ ಯುವ ವಿದ್ವಾಂಸರ ಗಮನವನ್ನು ಸೆಳೆದಿದ್ದಾರೆ. ಪ್ರಾಮಾಣಿಕತೆ ಪರಿಶ್ರಮವೇ ಎಲ್ಲರ ಜೀವನದ ಮಂತ್ರವಾಗಬೇಕು. ಆಗಬೇಕಾಗಿರುವ ಕೆಲಸಗಳು ಒಂದೇ, ಎರಡೇ? ಅದಕ್ಕೆ ಕೊನೆಯಿಲ್ಲ" ಎನ್ನುವ ಅವರ ಮನದಾಳದ ಮಾತುಗಳೇ ಅವರ ಜೀವನದ ಸಂದೇಶ.

ಮಾನವ ಸೇವೆಯಲ್ಲಿಯೇ ೯೬ ಸಂವತ್ಸರಗಳನ್ನು ಕಂಡಿರುವ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಆಶೀರ್ವಾದ ಆಶ್ರಯ ದೊರೆತಿದೆ. ಈ ಗಳಿಗೆಯಿಂದ ಶ್ರೀ ಆರಾಧ್ಯರ ಬಾಳರಥ ಇನ್ನೂ ಚುರುಕಾಗಿ ಬಹುದೂರ ಸಾಗುವ ಭರವಸೆ ಮೂಡಿಸಿದೆ. ಅವರಿಂದ ಕನ್ನಡ ಸಾಹಿತ್ಯ ಲೋಕಕ್ಕೆ ಮತ್ತಷ್ಟು ಸೇವೆ ಸಲ್ಲಲಿ ಎಂದು ಆಶಿಸೋಣ.

ಶ್ರೀಯುತರಿಗೂ ಮಠಕ್ಕೂ ಅನ್ಯೋನ್ಯ ಬಾಂಧವ್ಯ. ಶ್ರೀಗಳವರಲ್ಲಿ ಭಕ್ತಿ, ಸಂಸ್ಥೆಯ ಬಗ್ಗೆ ಅಭಿಮಾನ ಹೊಂದಿರುವ ನಾಡಿನ ಹಿರಿಯ ಸಂಶೋಧಕ ಪರಂಪರೆಯ ಮರೆಯಲಾಗದ ಶ್ರೀ ಎಸ್. ಬಸವಾರಾಧ್ಯರನ್ನು 'ಸಂಶೋಧಕ ಶಿವರತ್ನ'ರೆಂದು ಗೌರವಿಸುವುದರ ಮೂಲಕ ಶ್ರೀಮಠದ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳು ಶ್ರೀ ಸಿದ್ದಗಂಗೆಯ ಕಾರುಣ್ಯಮೂರ್ತಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೭ನೇ ಜನ್ಮದಿನೋತ್ಸವ ಗುರುವಂದನ ಸಮಾರಂಭದಲ್ಲಿ, ಬಸವಾದಿ ಪ್ರಮಥರು ಹಾಗೂ ಶ್ರೀ ಸಿದ್ದಗಂಗಾ ಗುರುಪರಂಪರೆ ಶ್ರೀಯುತರಿಗೆ ಸಕಲ ಸನ್ಮಂಗಳವನ್ನುಂಟು ಮಾಡಲೆಂದು ಪ್ರಾರ್ಥಿಸಿ, ಶ್ರೀ ಬಸವಾರಾಧ್ಯ ರವರ ಸಂಶೋಧನಾ ತಪಸ್ಸು ನಾಡು-ನುಡಿಗೆ ಲೇಸನ್ನುಂಟು ಮಾಡಲಿ ಎಂದು ಹಾರೈಸಿ ನೀಡಿದ ಸನ್ಮಾನ ಪತ್ರ.

★

---



ಕೈಗಾರಿಕೋದ್ಯಮಿಗಳು
ಬಿ.ಹೆಚ್. ರಸ್ತೆ, ತುಮಕೂರು – ೫೭೨೧೦೪.

## 'ಕೈಗಾರಿಕಾರತ್ನ'
## ಶ್ರೀ ಎನ್.ಆರ್. ಜಗದೀಶ್

ಶ್ರೀ ಎನ್.ಆರ್. ಜಗದೀಶ್ ಎಂಬುದು ತುಮಕೂರಿನ ಮನೆಮಾತು. ಶ್ರೀಯುತರನ್ನು ಕಾಣದವರಿಲ್ಲ; ಕೇಳದವರಿಲ್ಲ. ನಗರ ಜೀವನದ ಅವಿಭಾಜ್ಯವಾಗಿರುವ ಶ್ರೀಯುತರು ದಿನಾಂಕ ೧೪.೧೧.೧೯೩೪ರಂದು ಜನಿಸಿದರು. ತಂದೆ ಲಿಂ. ಧರ್ಮಪ್ರಕಾಶ ಶ್ರೀ ಎಸ್. ರುದ್ರಯ್ಯನವರು. ತಾಯಿ ಶ್ರೀಮತಿ ರುದ್ರಮ್ಮನವರು. ಆಚಾರವಂತ, ಸುಸಂಸ್ಕೃತ ಮನೆತನ. ಗುರು-ಲಿಂಗ-ಜಂಗಮದಲ್ಲಿ ಅಪಾರಭಕ್ತಿ ಶ್ರದ್ಧೆಗಳನ್ನು ಸದಾ ಎಚ್ಚರದಿಂದಿದ್ದು ಕಾಪಾಡಿಕೊಂಡು ಬಂದ ಕುಟುಂಬ. ಪ್ರಾಥಮಿಕ, ಪ್ರೌಢ ಮತ್ತು ಕಾಲೇಜು ವಿದ್ಯಾಭ್ಯಾಸವನ್ನು ಮಾಡಿದ್ದು ಬೆಂಗಳೂರಿನಲ್ಲಿ. ದಾಂಪತ್ಯದ ದಾರಿಯಲ್ಲಿ ನಡೆದದ್ದು ಶ್ರೀಮತಿ ಪಾರ್ವತಿಯವರೊಂದಿಗೆ. ವಿವಾಹಿತ ರಾದದ್ದು ದಿನಾಂಕ ೨.೨.೧೯೫೫ರಲ್ಲಿ. ಬಳ್ಳಾರಿ ಜಿಲ್ಲೆ ಸಂಡೂರಿನ ಸುಸಂಸ್ಕೃತ ಕುಟುಂಬದಿಂದ ಬಂದ ಸೌಜನ್ಯಶೀಲರಾದ ಶ್ರೀಮತಿ ಪಾರ್ವತಿಯವರು ಶ್ರೀ ಜಗದೀಶ್‌ರವರಿಗೆ ಸ್ಫೂರ್ತಿ ತುಂಬಿದರು. ಮುತ್ತಿನಂಥ ಎರಡು ಗಂಡು, ಒಂದು ಹೆಣ್ಣು ಸಂತಾನವನ್ನು ನೀಡಿದ ಮಾತೃವಾತ್ಸಲ್ಯಮಯಿ ಎನಿಸಿದರು. ಶ್ರೀ ಎನ್.ಜೆ. ರುದ್ರಪ್ರಕಾಶ್ ಮತ್ತು ಶ್ರೀ ಎನ್.ಜೆ. ಶಿವಕುಮಾರ್ ತಂದೆ ತಾಯಿಗಳೊಪ್ಪುವ ಸುಪುತ್ರರೆನಿಸಿದಂತೆ, ಶ್ರೀಮತಿ ಎನ್.ಜೆ. ಅರುಣ ತೌರುಮನೆಗೆ ಕೀರ್ತಿ ತಂದಿತ್ತಿರುವ ಮುದ್ದಿನಮಗಳು.

ಶ್ರೀ ಜಗದೀಶ್ ಅವರು ವೃತ್ತಿಯಲ್ಲಿ ವರ್ತಕರಾಗಿ, ಕೈಗಾರಿಕೋದ್ಯಮಿಗಳಾಗಿ ಹಂತಹಂತವಾಗಿ ಪ್ರಗತಿಪಥದಲ್ಲಿ ಮುನ್ನಡೆದ ಕ್ರಿಯಾಶೀಲರು. ತುಮಕೂರು ಮತ್ತು ಬೆಳಗಾಂನಲ್ಲಿನ ಸಿದ್ಧಗಂಗಾ ಆಯಿಲ್ ಎಕ್ಸ್ಟ್ರಾಕ್ಷನ್ಸ್‌ನ ಅಧ್ಯಕ್ಷರಾಗಿ ಹಾಗೂ ವ್ಯವಸ್ಥಾಪಕ ನಿರ್ದೇಶಕರಾಗಿ ಅವರು ಏರಿರುವ ಎತ್ತರ ಗಣನೀಯ ವಾದುದಾಗಿದೆ. ವ್ಯಾಪಾರ ಹಾಗೂ ಕೈಗಾರಿಕೋದ್ಯಮದಲ್ಲಿನ ಮೂಲ-ಚೂಲಗಳ ನಿಕಟ ಪರಿಚಯವುಳ್ಳ ಶ್ರೀಯುತರು ಅನುಭವವೃದ್ಧರು. ವೃತ್ತಿ ಶ್ರೀಮಂತಿಕೆಯುಳ್ಳ ಸೌಜನ್ಯಶೀಲರು. ವ್ಯವಹಾರ ಕುಶಲಿಗಳು. ತಾವು ಸಾಧಿಸಿದ ವೃತ್ತಿ ನೈಪುಣ್ಯತೆಗಾಗಿ ರಾಷ್ಟ್ರೀಯ ಪ್ರಶಸ್ತಿಯನ್ನು ಮೂರು ಭಾರಿ ಮುಂಬಯಿಯ ಸಾಲ್ವೆಂಟ್ ಎಕ್ಸ್‌ಟ್ರಾಕ್ಟರ್ಸ್ ಅಸೋಸಿಯೇಷನ್ ಆಫ್ ಇಂಡಿಯಾ ಸಂಸ್ಥೆಯಿಂದ ಸಿದ್ಧಗಂಗಾ ಆಯಿಲ್ ಎಕ್ಸ್‌ಟ್ರಾಕ್ಷನ್ಸ್ ಲಿಮಿಟೆಡ್‌ಗೆ ಪಡೆದುಕೊಂಡಿರುವ ನಗರದ ಹೆಮ್ಮೆಯ ಕೈಗಾರಿಕೋದ್ಯಮಿ ಪ್ರತಿಷ್ಠಿತರು.

ಶ್ರೀ ಜಗದೀಶ್‌ರವರದು ಕೇವಲ ವೃತ್ತಿ ಕ್ಷೇತ್ರಕ್ಕೆ ಸೀಮಿತವಾದ ಸೇವೆಯಲ್ಲ. ತುಮಕೂರಿನ ನಾಗರಿಕ ಬದುಕಿಗೆ ಶ್ರೀಯುತರು ಸಲ್ಲಿಸುತ್ತ ಬಂದಿರುವ ಸೇವೆ ವೈವಿಧ್ಯಪೂರ್ಣ ವಾದುದು. ಅದು ರಾಜಕೀಯವಾಗಿ, ಬ್ಯಾಂಕಿಗ್ ಸೇವೆಯಾಗಿ, ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ್ದಾಗಿ, ವೀರಶೈವ ಸಮಾಜಕ್ಕೆ ಸಂಬಂಧ ಪಟ್ಟಂತೆ ಬಹುಮುಖವಾಗಿ ವ್ಯಾಪಿಸಿದ್ದಾಗಿದೆ.

ಶ್ರೀಯುತರು ಕಾಂಗ್ರೆಸ್ ಪಕ್ಷದ ಸಕ್ರಿಯ ಕಾರ್ಯಕರ್ತ ರಾಗಿ, ಸಿಟಿಕಾಂಗ್ರೆಸ್ ಸಮಿತಿಯ ಹಿಂದಿನ ಅಧ್ಯಕ್ಷರಾಗಿ ಹತ್ತು ವರ್ಷಗಳ ಕಾಲ, ೧೯೮೪ರಲ್ಲಿ ಪುರಸಭೆಯ ಚುನಾವಣಾ ವ್ಯವಸ್ಥಾಪಕ ಅಧ್ಯಕ್ಷರಾಗಿ, ಎಂ.ಪಿ. ಮತ್ತು ಎಂ.ಎಲ್.ಎ. ಚುನಾವಣಾ ಸಮಿತಿಯ ಅಧ್ಯಕ್ಷರಾಗಿ, ತುಮಕೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷರಾಗಿ, ಬೆಳಗಾಂ ಜಿಲ್ಲೆಯ ಎಂ.ಪಿ. ಚುನಾವಣೆಯ ವೀಕ್ಷಕರಾಗಿ ಸೇವೆ ಸಲ್ಲಿಸಿದ ಹಿರಿಮೆ ಶ್ರೀ ಜಗದೀಶ್‌ರವರದಾಗಿದೆ.

ತುಮಕೂರು ಗ್ರೈನ್ ಮರ್ಚೆಂಟ್ಸ್ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿ ತುಮಕೂರು ವೀರಶೈವ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿ ಗಣನೀಯವಾದ ಮತ್ತು ಸುಭದ್ರತೆಯನ್ನು ಹಾಕಿದ ಶ್ರೇಯಸ್ಸು ಶ್ರೀಯುತರದು.

ಶಿಕ್ಷಣ ಕ್ಷೇತ್ರದಲ್ಲಿ ಶ್ರೀಯುತರು ಸಲ್ಲಿಸುತ್ತಿರುವ ಸಂಸ್ಥೆಗಳು ವಿಶಿಷ್ಟವಾಗಿವೆ. ಸರ್ವೋದಯ ಶಿಕ್ಷಣದ ಸಂಸ್ಥೆಯ ಅಧ್ಯಕ್ಷರಾಗಿ, ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಆಡಳಿತ ಮಂಡಳಿಯ ಸದಸ್ಯರಾಗಿ, ಸಿದ್ಧಗಂಗಾ ಪ್ರಥಮ ದರ್ಜೆ ಕಾಲೇಜು (ಬಾಲಕ, ಬಾಲಕಿಯರು) ಆಡಳಿತ ಮಂಡಳಿಯ ಸದಸ್ಯರಾಗಿ, ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟಿನ ಆಡಳಿತ ಮಂಡಳಿಯ ಸದಸ್ಯರಾಗಿ, ಶ್ರೀ ಜಿ.ಎಂ. ಸಿದ್ದರಾಮಣ್ಣ ಚಾರಿಟೀಸ್ ಟ್ರಸ್ಟ್‌ನ ಕಾರ್ಯದರ್ಶಿಗಳಾಗಿ, ಎನ್.ಆರ್. ಚಾರಿಟಬಲ್ ಟ್ರಸ್ಟ್‌ನ ವಿದ್ಯಾರ್ಥಿನಿಲಯದ ಅಧ್ಯಕ್ಷರಾಗಿ ಸೇವೆಸಲ್ಲಿಸುತ್ತಿದ್ದಾರೆ. ಶ್ರೀ ಸಿದ್ಧವಿನಾಯಕ ಸೇವಾ ಸಮಿತಿಯ ಉಪಾಧ್ಯಕರಾಗಿ, ತುಮಕೂರು ದಸರಾ ಸಮಿತಿಯ ಅಧ್ಯಕ್ಷರಾಗಿ, ತುಮಕೂರು ಛೇಂಬರ್ ಆಫ್ ಕಾಮರ್ಸ್ ಮತ್ತು ಕೈಗಾರಿಕೆಯ ಅಧ್ಯಕ್ಷರಾಗಿ ಶ್ರಮಿಸಿದ್ದಾರೆ. ವಿದ್ಯಾನಿಕೇತನ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ ದುಡಿಯುತ್ತಿದ್ದಾರೆ. ಶ್ರೀಯುತರು ತುಮಕೂರು ಗ್ರೈನ್ ಮರ್ಚೆಂಟ್ಸ್ ಅಸೋಸಿಯೇಷನ್ನಿನ, ರೋಟರಿ ಸಂಸ್ಥೆಯ, ವೀರಶೈವ ಸಮಾಜದ, ಅಧ್ಯಕ್ಷರಾಗಿ ಆಯಾ ಸಂಸ್ಥೆಗಳ ಅಭಿವೃದ್ಧಿಗೆ ಕಾರಣರಾಗಿರುವಂತೆ, ಮುಂಬೈಯಿಯ ಸಾಲ್ವೆಂಟ್ ಎಕ್ಸ್‌ಟ್ರಾಕ್ಷನ್ ಅಸೋಸಿಯೇಷನ್ನಿನ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಸೇವೆಸಲ್ಲಿಸಿದ ಹೆಗ್ಗಳಿಕೆಯುಳ್ಳವರಾಗಿದ್ದಾರೆ.

ಶ್ರೀ ಎನ್.ಆರ್. ಜಗದೀಶ್‌ರವರು ಹಲವಾರು ಪ್ರತಿಷ್ಠಿತ ಹಾಗೂ ಗೌರವಾನ್ವಿತ ಸಭೆ ಸಮ್ಮೇಳನಗಳಲ್ಲಿ ಭಾಗವಹಿಸಿದ ಅನುಭವೀ ಹಿರಿಯರಾಗಿದ್ದಾರೆ. ೧೯೮ರಲ್ಲಿ ನಡೆದ ಆಲ್ ಇಂಡಿಯಾ ಆಯಿಲ್ ಅಂಡ್ ಆಯಿಲ್ ಸೀಡ್ಸ್ ಕಾನ್ಫರೆನ್ಸ್‌ನಲ್ಲಿ ಗೌರವಾನ್ವಿತ ಪ್ರಧಾನಮಂತ್ರಿಗಳಾದ ಶ್ರೀ ಹೆಚ್.ಡಿ. ದೇವೇಗೌಡ ಮತ್ತು ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಜೆ.ಎಚ್. ಪಟೇಲ್ ಅವರು ಮುಖ್ಯ ಅತಿಥಿಗಳಾಗಿದ್ದ ಸಮ್ಮೇಳನದಲ್ಲಿ ಅಧ್ಯಕ್ಷರಾಗಿ ಪಾಲ್ಗೊಂಡ ಹಿರಿಮೆ ಶ್ರೀಯುತರದು.

ಈ ಎಲ್ಲಕ್ಕೂ ಹೆಚ್ಚಿನದಾಗಿ ಶ್ರೀ ಎನ್.ಆರ್. ಜಗದೀಶ್‌ರವರಿಗೂ ಶ್ರೀ ಸಿದ್ಧಗಂಗಾ ಮಠಕ್ಕೂ ಬೆಳೆದು ಬಂದಿರುವ ಮಧುರ ಬಾಂಧವ್ಯ ಅನನ್ಯವಾದದ್ದು. ಶ್ರೀಮಠದ ಕಷ್ಟ-ಸುಖಗಳಲ್ಲಿ ಮಿಳಿತವಾಗಿರುವ ಶ್ರೀಯುತರು ಪರಮಪೂಜ್ಯ ಶ್ರೀಶ್ರೀಗಳವರಲ್ಲಿ ಇಟ್ಟುಕೊಂಡಿರುವ ಭಕ್ತಿ ಶ್ರದ್ಧೆಗಳು ಸ್ಮರಣೀಯವಾದುವು. ಪೂಜ್ಯಪಾದರು ಶ್ರೀ ಜಗದೀಶ್‌ರವರ ಆರಾಧ್ಯದೈವ, ಅವರಿಗಷ್ಟೆ ಅಲ್ಲ ಅವರ ಮನೆಮಂದಿಗೆಲ್ಲ ಶ್ರೀಗಳವರು ದೈವಸ್ವರೂಪರು.

ಶ್ರೀಯುತರು ನೇರ ನಡೆ-ನುಡಿಯವರು - ಸಮಾಜಾಭಿಮಾನಿಗಳು, ಆಡಳಿತ ದಕ್ಷತೆಗೆ ಹೆಸರಾದವರು. ಧಾರ್ಮಿಕ ಪ್ರಜ್ಞಾಶೀಲರು. ಶ್ರೀಯುತರ ಆದರ್ಶ ವ್ಯಕ್ತಿತ್ವವನ್ನು ಮನಗಂಡ ಶ್ರೀ ಸಿದ್ಧಗಂಗಾ ಮಠದ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಹಾಗೂ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯಲ್ಲಿ ಸೇವಾನಿರತರಾಗಿರುವ ಸಮಸ್ತ ಬಂಧುಗಳು ಶ್ರೀಯುತರವನ್ನು 'ಕೈಗಾರಿಕಾರತ್ನ'ರೆಂದು ಗೌರವಿಸಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೭ನೇ ಜನ್ಮದಿನೋತ್ಸವ ಗುರುವಂದನ ಪುಣ್ಯ ಸಮಾರಂಭದಲ್ಲಿ, ಬಸವಾದಿ ಶರಣರು ಮತ್ತು ಶ್ರೀ ಸಿದ್ಧಗಂಗಾ ಗುರುಪರಂಪರೆ ಶ್ರೀಯುತರಿಗೆ ಸಕಲ ಸನ್ಮಂಗಳವನಿತ್ತು ಆಶೀರ್ವದಿಸಲಿ ಎಂದು ಪ್ರಾರ್ಥಿಸಿ ನೀಡಿದ ಸನ್ಮಾನ ಪತ್ರ.

### ಶ್ರೀವಾಣಿ

ಸೋಮಾರಿತನವೆನ್ನುವುದು ಶರಣರಿಗೆ ಸೇರದು. ಪರಾವಲಂಬನೆ ಯೆಂಬುದು ಅವರಿಗೆ ದೂರದ ಮಾತು. ದುಡಿಮೆಯು ಜೀವನದ ಕರ್ತವ್ಯವೆಂದು ಅವರ ಅನುಭವದಿಂದ ಮೂಡಿಬಂದ ಮಾತು. ಸಮಾಜ ಘಟಕನಾಗಿರತಕ್ಕ ಪ್ರತಿಯೊಬ್ಬ ವ್ಯಕ್ತಿಯೂ ಯಾವುದಾದ ರೊಂದು ಕಾರ್ಯವನ್ನು ಅವಲಂಬಿಸಿಯೇ ತೀರಬೇಕೆಂಬ ನಿರ್ಬಂಧವನ್ನು ಹೂಡಿದರು. ಸಾಮಾನ್ಯವಾಗಿ ದೇಹ ಪೋಷಣೆಯು ಸಹ ಆಹಾರೋತ್ಪಾದನೆ, ಧಾನ್ಯ ಸಂವರ್ಧನ, ಪಾಕಕ್ರಿಯೆ ಮುಂತಾದಕಾರ್ಯಗಳನ್ನು ನೆರವೇರಿಸದೆ ಆಗದು. ಅಂದ ಮೇಲೆ ಜೀವನಕ್ಕೆ ತಕ್ಕ ಕರ್ಮವು ಅವಶ್ಯಕ. ಹಾಗೆಯೇ ಆಧ್ಯಾತ್ಮಿಕ ಸಾಧನೆಗೂ ಕ್ರಿಯೆಯು ಅವಶ್ಯಕವೆಂದು ಶರಣರು ಸಾರಿರುವರು.

ಕ್ರಿಯೆಮಾಡದೆ ಸಿದ್ಧಿ ಪ್ರಾಪ್ತಿಯಾಗದು. ಗತಿ ಮತಿ ಕರುಣಾದಿ ಗಳು ಇರುವವರಿವಿಗೆ ಕರ್ಮಗಳನ್ನು ಮಾಡುತ್ತಲೇ ಇರಬೇಕು. ಕೇವಲ ಜ್ಞಾನ ಮಾತ್ರವೇ ಹೆಚ್ಚಿನದೆಂದು ಕುಳಿತರೆ ಅದು ತನ್ನಷ್ಟಕ್ಕೆ ತಾನೆ ತಲೆಯಲ್ಲಿ ಬಂದು ಸೇರದು. ಸತ್ಕ್ರಿಯಾ ಮಾರ್ಗದಿಂದ ಸಾಗಿ ಜ್ಞಾನವನ್ನು ಅಳವಡಿಸಲಿಕ್ಕೆ ಬೇಕು. ಆಗ ಸಿದ್ಧಿಯು ಕೈ ಸೇರುವುದು. ಈ ರೀತಿ ಕಾಯಕವೆನ್ನುವುದು ಜೀವನದಲ್ಲಿ ಒಂದು ಸ್ಥಿರವಾದ ಅನಿವಾರ್ಯ ಪ್ರಸಂಗವೆಂಬುದು ಶರಣರ ಅಭಿಮತ

## ೧೯೮೯ರಿಂದ ಪ್ರಾರಂಭವಾದ ಶ್ರೀ ಗುರುವಂದನ ಸಮಾರಂಭದಲ್ಲಿ ಸನ್ಮಾನಿತರಾದ ಗಣ್ಯಮಾನ್ಯರು

### ೨.೪.೧೯೮೯

೧. ಡಾ. ಸಿದ್ಧಯ್ಯ ಪುರಾಣಿಕ
ಸುಪ್ರಸಿದ್ಧ ಸಾಹಿತಿಗಳು, ಬೆಂಗಳೂರು.

೨. ಡಾ. ಜಿ.ಎಸ್. ಶಿವರುದ್ರಪ್ಪ
ಸುಪ್ರಸಿದ್ಧ ಕವಿಗಳು ಮತ್ತು ಶ್ರೀಮಠದ ಹಿರಿಯ ವಿದ್ಯಾರ್ಥಿಗಳು.

೩. ಡಾ. ಟಿ.ಎಸ್. ಮಲ್ಲಿಕಾರ್ಜುನಯ್ಯ
ಹೆಸರಾಂತ ವೈದ್ಯರು, ತುಮಕೂರು.

### ೧೩.೪.೧೯೯೦

೧. ಡಾ. ಎಚ್. ತಿಪ್ಪೇರುದ್ರಸ್ವಾಮಿ
ಸುಪ್ರಸಿದ್ಧ ಸಾಹಿತಿಗಳು, ಮೈಸೂರು.

೨. ಡಾ. ಎನ್. ರುದ್ರಯ್ಯ
ಕುಲಪತಿಗಳು, ಗುಲ್ಬರ್ಗಾ ವಿಶ್ವವಿದ್ಯಾಲಯ.

೩. ಶ್ರೀ ಕೆ.ಎಲ್. ನಂಜಪ್ಪ
ಕೈಗಾರಿಕೋದ್ಯಮಿಗಳು, ಬೆಂಗಳೂರು.

### ೨೮.೪.೧೯೯೧

೧. ಪದ್ಮಶ್ರೀ ಡಾ. ಎಂ.ಸಿ. ಮೋದಿ
ಖ್ಯಾತ ನೇತ್ರ ತಜ್ಞರು, ಬೆಂಗಳೂರು.

೨. ಡಾ. ದೇ. ಜವರೇಗೌಡ
ಮಾಜಿ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ.

೩. ಪದ್ಮಶ್ರೀ ಆರ್.ಎಂ.ಬಿ. ಆರಾಧ್ಯ
ಕೈಗಾರಿಕೋದ್ಯಮಿಗಳು ಮತ್ತು ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ಬೆಂಗಳೂರು.

೪. ಶ್ರೀ ಹೆಚ್.ಎಂ. ಗಂಗಾಧರಯ್ಯ
ಸಂಸ್ಥಾಪಕ ಕಾರ್ಯದರ್ಶಿಗಳು,
ಶ್ರೀ ಸಿದ್ಧಾರ್ಥ ಶಿಕ್ಷಣ ಸಂಸ್ಥೆ, ತುಮಕೂರು.

### ೧.೪.೧೯೯೨

೧. ಶ್ರೀ ಶ್ಯಾಮನೂರು ಶಿವಶಂಕರಪ್ಪ
ಕಾರ್ಯದರ್ಶಿಗಳು, ಬಾಪೂಜಿ ಶಿಕ್ಷಣ ಸಂಸ್ಥೆ, ದಾವಣಗೆರೆ.

೨. ಡಾ. ಟಿ.ಬಿ. ಬಸವರಾಜೇಂದ್ರ
ಖ್ಯಾತ ವೈದ್ಯರು, ಮೈಸೂರು.

೩. ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

### ೧೧.೪.೧೯೯೩

೧. ಶ್ರೀ ಎಂ.ಎಸ್. ರಾಮಯ್ಯ
ಅಧ್ಯಕ್ಷರು,
ಶ್ರೀ ಎಂ.ಎಸ್. ರಾಮಯ್ಯ ವಿದ್ಯಾಸಂಸ್ಥೆ, ಬೆಂಗಳೂರು.

೨. ಶ್ರೀ ಪ್ರಭಾಕರ ಜೋಶಿ
ಕಾರ್ಯದರ್ಶಿಗಳು, ಕೆ.ಎಲ್.ಇ. ಸೊಸೈಟಿ, ಬೆಳಗಾವಿ.

೩. ಶ್ರೀ ಗೊ.ರು. ಚನ್ನಬಸಪ್ಪ
ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

### ೩.೪.೧೯೯೪

೧. ಶ್ರೀ ಎಂ.ಎಸ್. ಗುರುಪಾದಸ್ವಾಮಿ
ಕೇಂದ್ರ ಸಚಿವರು, ಮೈಸೂರು.

೨. ಡಾ. ಎಂ. ಷಡಕ್ಷರಸ್ವಾಮಿ
ಮಾಜಿ ಪ್ರಾಚಾರ್ಯರು, ಸೆಂಟ್ರಲ್ ಕಾಲೇಜು, ಬೆಂಗಳೂರು.

೩. ಡಾ. ಡಿ.ಎಂ. ನಂಜುಂಡಪ್ಪ
ಉಪಾಧ್ಯಕ್ಷರು, ರಾಜ್ಯಯೋಜನಾ ಆಯೋಗ, ಬೆಂಗಳೂರು.

೪. ವಿದ್ವಾನ್ ಶ್ರೀ ಎನ್. ರಂಗನಾಥಶರ್ಮ
ಸಂಸ್ಕೃತ ವಿದ್ವಾಂಸರು, ಬೆಂಗಳೂರು.

೫. ಶ್ರೀ ಜಿಪ್ಪಯಾರ್
ಕೈಗಾರಿಕೋದ್ಯಮಿಗಳು, ಚೆನ್ನೈ.



### ೨.೪.೧೯೯೫

೧. ಶ್ರೀ ಟಿ. ಅನಂತರಾಮ ಶ್ರೇಷ್ಠಿ
ಪ್ರಸಿದ್ಧ ವರ್ತಕರು, ತುಮಕೂರು.

೨. ಶ್ರೀ ಪಾಟೀಲ ಪುಟ್ಟಪ್ಪ
ಸುಪ್ರಸಿದ್ಧ ಪತ್ರಿಕಾ ಸಂಪಾದಕರು, ಹುಬ್ಬಳ್ಳಿ.

೩. ಡಾ. ಹಾ.ಮ. ನಾಯಕ
ಮಾಜಿ ಕುಲಪತಿಗಳು, ಗುಲ್ಬರ್ಗಾ ವಿಶ್ವವಿದ್ಯಾಲಯ.

೪. ಶ್ರೀ ಕೆ.ಹೆಚ್. ರಂಗನಾಥ
ಮಾಜಿ ಸಚಿವರು, ಬೆಂಗಳೂರು.

### ೭.೪.೧೯೯೬

೧. ಶ್ರೀ ಸಾಗರಹಳ್ಳಿ ರೇವಣ್ಣ
ಮಾಜಿ ಸಚಿವರು, ತುಮಕೂರು.

೨. ಡಾ. ಎಂ. ಚಿದಾನಂದಮೂರ್ತಿ
ಹಿರಿಯ ಸಂಶೋಧಕರು, ಬೆಂಗಳೂರು.

೩. ಡಾ. ಎನ್.ಆರ್. ಶೆಟ್ಟಿ
ಮಾಜಿ ಕುಲಪತಿಗಳು, ಜ.ವಿ. ವಿದ್ಯಾಲಯ, ಬೆಂಗಳೂರು.

೪. ಶ್ರೀ ಎಂ. ಲಕ್ಷ್ಮೀನಾರಾಯಣ
ಅಧ್ಯಕ್ಷರು, ಗ್ರಾಮಪಂಚಾಯತಿ, ಬೂದಿಗೆರೆ,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

### ೧೩.೪.೧೯೯೭

೧. ಶ್ರೀ ಕೆ. ರಾಮರಾವ್
ವ್ಯವಸ್ಥಾಪಕ ಸಂಪಾದಕರು,
ಸಂಯುಕ್ತ ಕರ್ನಾಟಕ ದಿನಪತ್ರಿಕೆ, ಬೆಂಗಳೂರು.

೨. ಶ್ರೀ ಕೆ. ಗುರುಡಾಚಾರ್
ಹಿರಿಯ ನ್ಯಾಯವಾದಿಗಳು, ತುಮಕೂರು.

೩. ಡಾ. ಸಿದ್ಧಲಿಂಗಯ್ಯ
ಕವಿಗಳು ಮತ್ತು ಎಂ.ಎಲ್.ಸಿ. ಬೆಂಗಳೂರು.

೪. ಶ್ರೀ ಟಿ.ಆರ್. ಮಹಾದೇವಯ್ಯ
ನಿವೃತ್ತ ಉಪ ಸಂಪಾದಕರು, ಕನ್ನಡ ನಿಘಂಟು
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

### ೫.೪.೧೯೯೮

೧. ಡಾ. ಎಲ್. ಬಸವರಾಜು
ನಿವೃತ್ತ ಕನ್ನಡ ಪ್ರಾಧ್ಯಾಪಕರು ಮತ್ತು
ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ಮೈಸೂರು.

೨. ಶ್ರೀ ಎ.ಸಿ. ಶಾಂತಮಲ್ಲೇಗೌಡ
ಚಂದ್ರಿಕಾ ಎಸ್ಟೇಟ್, ಚಿಕ್ಕಮಗಳೂರು.

೩. ಶ್ರೀ ಪಂಡಿತ ಚನ್ನಪ್ಪ ಎರೇಸೀಮೆ
ಸಿದ್ಧಗಂಗಾ ಮಾಸಪತ್ರಿಕೆಯ ಪ್ರಧಾನ ಸಂಪಾದಕರು ಮತ್ತು ವಿದ್ವಾಂಸರು, ಬೆಂಗಳೂರು.

೪. ಶ್ರೀ ಎನ್. ಮಲ್ಲಪ್ಪ
ನಿವೃತ್ತ ಉಪವಿಭಾಗ ಆಯುಕ್ತರು ಮತ್ತು ಕ.ರಾ. ಕಾರ್ಯದರ್ಶಿ ಹಾಗೂ ಉಣ್ಣೆ ಕೈಗಾರಿಕಾ ಸಂಸ್ಥೆ ಅಧ್ಯಕ್ಷರು, ತುಮಕೂರು.

### ೪.೪.೧೯೯೯

೧. ಶ್ರೀ ನಿಟ್ಟೂರು ಶ್ರೀನಿವಾಸರಾವ್
ನಿವೃತ್ತ ಮುಖ್ಯ ನ್ಯಾಯಾಧೀಶರು,
ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು.

೨. ಶ್ರೀ ಪಂಡಿತ ಪುಟ್ಟರಾಜು ಗವಾಯಿ
ಅಧ್ಯಕ್ಷರು, ಶ್ರೀ ವೀರಶೈವ ಪುಣ್ಯಾಶ್ರಮ, ಗದಗ.

೩. ಡಾ. ಸಾ.ಶಿ. ಮರುಳಯ್ಯ
ಮಾಜಿ ಅಧ್ಯಕ್ಷರು, ಕ.ಸಾ.ಪ. ಬೆಂಗಳೂರು.

೪. ಡಾ. ಎಂ.ಎಸ್. ರವೀಂದ್ರ
ನೇತ್ರ ತಜ್ಞರು, ಬೆಂಗಳೂರು.

### ೨.೪.೨೦೦೦

೧. ಶ್ರೀ ಟಿ.ಎಂ. ಅಂಗಡಿ, ಅಧ್ಯಕ್ಷರು,
ಶ್ರೀ ಶರಣ ವೀರೇಶ್ವರ ಪಟ್ಟಣ ಸಹಕಾರ ಬ್ಯಾಂಕ್ (ನಿ.)
ನಾಲತವಾಡ, ವಿಜಾಪುರ ಜಿಲ್ಲೆ.

೨. ಶ್ರೀ ಹೆಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್
ಪ್ರಸಿದ್ಧ ಸಾಹಿತಿಗಳು ಮತ್ತು ಅಂಕಣಕಾರರು, ಮೈಸೂರು.

೩. ಶ್ರೀ ಎನ್.ಬಿ. ಮಹಂತಗೌಡ
ಕಾಫಿ ಬೆಳೆಗಾರರು, ನಾರ್ವೆಗಾಮೆ,
ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ.

೪. ಶ್ರೀಮತಿ ಗಂಗಮ್ಮ
ದಿ. ಹೆಚ್.ಎಂ. ಗಂಗಾಧರಯ್ಯನವರ ಧರ್ಮಪತ್ನಿ,
ಸಿದ್ಧಾರ್ಥನಗರ, ತುಮಕೂರು.

**೧.೪.೨೦೦೧**

೧. **ಶ್ರೀ ಗೋಪಾಲ್ ಶ್ರೀನಿವಾಸನ್**
ನಿರ್ದೇಶಕರು, ಟಿ.ವಿ.ಎಸ್. ಎಲೆಕ್ಟ್ರಾನಿಕ್ಸ್ ಲಿ.,
ಹಿರೇಹಳ್ಳಿ, ತುಮಕೂರು.

೨. **ಡಾ. ಎಂ.ಎಂ. ಕಲಬುರ್ಗಿ**
ಮಾಜಿ ಕುಲಪತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩.. **ಶ್ರೀ ಬಲವಂತಸಿಂಹ**
ಅಧ್ಯಕ್ಷರು, ರಾಜಪುರೋಹಿತ್ ಸಮಾಜ, ಬೆಂಗಳೂರು.

೪. **ಶ್ರೀ ಚಿಕ್ಕವೀರಪ್ಪ**
ರಘುವನಹಳ್ಳಿ, ಬೆಂಗಳೂರು.

**೭.೪.೨೦೦೨**

೧. **ಡಾ. ಪಿ. ಸೆಲ್ವಿದಾಸ್**
ರಾಜ್ಯಸಭಾ ಸದಸ್ಯರು, ಬೆಂಗಳೂರು.

೨. **ಡಾ. ಚಂದ್ರಶೇಖರ ಶೆಟ್ಟಿ**
ಮಾಜಿ ಕುಲಪತಿಗಳು, ರಾಜೀವ್‌ಗಾಂಧಿ ಆರೋಗ್ಯ ವಿಶ್ವವಿದ್ಯಾಲಯ, ಬೆಂಗಳೂರು.

೩. **ಮಾಸ್ಟರ್ ಹಿರಣಯ್ಯ**
ರಂಗಭೂಮಿ ಹಿರಿಯ ಕಲಾವಿದರು, ಬೆಂಗಳೂರು.

೪. **ಡಾ. ಗುರುಲಿಂಗ ಕಾಪಸೆ**
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫. **ಶ್ರೀ ಬಿ.ಎಸ್. ದೇವರಾಜ್**
ಕಾಫಿ ಪ್ಲಾಂಟರ್ಸ್, ಬಾಳ್ಳುಪೇಟೆ, ಹಾಸನ ಜಿಲ್ಲೆ.

೬. **ಯಜಮಾನ್ ಶ್ರೀಕಂಠಪ್ಪ**
ದಾನಿಗಳು, ಬೆಂಗಳೂರು.

೭. **ಶ್ರೀ ತಿಮ್ಮಪ್ಪ**
ವ್ಯವಸಾಯಗಾರರು, ಎ. ವೆಂಕಟಾಪುರ,
ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ.

**೬.೪.೨೦೦೩**

೧. **ಶ್ರೀ ಮತ್ತೂರು ಕೃಷ್ಣಮೂರ್ತಿ**
ಕಾರ್ಯನಿರ್ವಾಹಕ ನಿರ್ದೇಶಕರು,
ಭಾರತೀಯ ವಿದ್ಯಾಭವನ, ಬೆಂಗಳೂರು.

೨. **ಶ್ರೀ ವಿಜಯ ಸಂಕೇಶ್ವರ**
ಸಂಸದರು ಮತ್ತು ಪತ್ರಿಕೋದ್ಯಮಿಗಳು, ಧಾರವಾಡ.

೩. **ಡಾ. ಕೆ.ಟಿ. ಸುರೇಂದ್ರ**
ಮೂಳೆ ತಜ್ಞರು, ಬೆಂಗಳೂರು.

೪. **ಶ್ರೀ ಕಸ್ತೂರಿ ರಮೇಶ್ ಪೈ**
ಕೈಗಾರಿಕೋದ್ಯಮಿಗಳು, ತುಮಕೂರು.

**೪.೪.೨೦೦೪**

೧. **ಡಾ. ಎಸ್.ಜೆ. ನಾಗಲೋಟಿಮಠ**
ಮಾಜಿ ಪ್ರಚಾರ್ಯರು, ಕೆ.ಎಂ.ಸಿ. ಹುಬ್ಬಳ್ಳಿ.

೨. **ಡಾ. ಹೆಚ್.ಎಲ್. ನಾಗೇಗೌಡ**
ಅಧ್ಯಕ್ಷರು, ಹಿರಿಯ ಜಾನಪದ ವಿದ್ವಾಂಸರು
ಜಾನಪದ ಲೋಕ, ರಾಮನಗರ, ಬೆಂಗಳೂರು ಗ್ರಾ. ಜಿಲ್ಲೆ.

೩.. **ಪ್ರೊ. ಎನ್. ಬಸವಾರಾಧ್ಯ**
ನಿಕಟಪೂರ್ವ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪. **ಶ್ರೀ ಎನ್.ಆರ್. ಜಗದೀಶ್**
ಕೈಗಾರಿಕೋದ್ಯಮಿಗಳು, ತುಮಕೂರು.

**ಶ್ರೀವಾಣಿ**

ವಿದ್ಯಾರ್ಥಿಗಳು ಬೆಳಿಗ್ಗೆ ಎದ್ದರೆ ಮುಷ್ಕರ ಹೂಡಿ ಕಿಟಕಿ ಮುರಿದು. ಗಾಜನ್ನೊಡೆದು, ನಿತ್ಯದ ಸಾಮಾನ್ಯ ವ್ಯವಹಾರಕ್ಕೆ ಧಕ್ಕೆ ತಂದು ಸಾರ್ವಜನಿಕ ಆಸ್ತಿಪಾಸ್ತಿಗೆ 'ಜಖಂ' ಮಾಡುವುದರಲ್ಲಿ ಸಾಹಸ ಪ್ರವೃತ್ತರಾಗಿ ಬೆಳೆಯುತ್ತಿರುವ ಕುಡಿಗಳಾದ ನೀವು, ಭವ್ಯ ಭಾರತದ ದಿವ್ಯ ಶಿಲ್ಪಿಗಳಾಗಬೇಕಾದ ನೀವು, ವಿದ್ಯಾರ್ಥಿಗಳು ಪೊಳ್ಳುತನದ ಮಾತುಗಳನ್ನು ದೂರಮಾಡಿ, ಯಥಾವತ್ತಾದ ಮಾತಿಗೆ ಬೆಲೆಗೊಟ್ಟು ಸತ್ಯವಾದ ಸರಳವಾದ ನೇರವಾದ ಸ್ಪಷ್ಟವಾದ ಮಾತಿನಿಂದ ದೇವರನ್ನು ಕಂಡು ಜನತೆಯಲ್ಲಿ ಮನೆಮಾಡಿಕೊಂಡಿರುವ ಅಜ್ಞಾನ, ಮೌಢ್ಯ, ಆಲಸಿಕೆಗಳನ್ನು ಬಿಡುವಂತೆ ಮಾಡಿ ದೇಶ ನಿರ್ಮಾಣ ಕಾರ್ಯದಲ್ಲಿ ನೆರವಾಗಬೇಕು. ಆಗಲೇ ಹುಟ್ಟಿದ್ದಕ್ಕೂ ಸಾರ್ಥಕ, ಕಲಿತದ್ದಕ್ಕೂ ಒಂದು ಬೆಲೆ.





# ಶಾಂತಿನಿಕೇತನ

– ಜಿ.ಕೆ. ಕುಲಕರ್ಣಿ
ಎ.ಸಿ. ಧರ್ಮಪಾಲ್ ಕಾಂಪೌಂಡ್,
ಪಾರ್ಕ್ ರಸ್ತೆ, ಎಸ್.ಎಸ್. ಪುರಂ,
ತುಮಕೂರು.



೧೯೭೨ರಲ್ಲಿ ಬಿಜಾಪೂರದ ನಮ್ಮ ನೂತನ ಕಲಾಮಹಾವಿದ್ಯಾಲಯದ ವಾರ್ಷಿಕ ಸ್ನೇಹ ಸಮ್ಮೇಳನಕ್ಕೆ ಮುಖ್ಯ ಅತಿಥಿಯಾಗಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಆಗಮಿಸಿದ್ದರು. ಅಂದು ನನಗಾದ ಶ್ರೀಗಳ ಪ್ರಥಮದರ್ಶನ. ಅಂದು ನೆರೆದ ಸಾವಿರಾರು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಪ್ರಬುದ್ಧಪೂರ್ಣವಾಗಿ ಮಾತನಾಡಿ, ವಿದ್ಯಾರ್ಥಿಗಳಿಗೆ ತಮ್ಮ ಕರ್ತವ್ಯ ಜ್ಞಾಪಿಸಿಕೊಟ್ಟರು. ನಾವೆಲ್ಲ ಮಂತ್ರಮುಗ್ಧರಾಗಿ ಅಂದಿನ ಅವರ ಹಿತವಚನಗಳನ್ನು ಕೇಳಿದೆವು. ಒಬ್ಬ ಧೀರ ಸನ್ಯಾಸಿಯ ಸಾಮಾಜಿಕ ಕಳಕಳಿ ಆ ಮಾತುಗಳಲ್ಲಿ ಎದ್ದು ಕಾಣುತ್ತಿತ್ತು. ಮಠಗಳೆಂದರೆ ಕೇವಲ ಭಕ್ತರಿಂದ ಸೇವೆಪಡೆಯುವ, ಕಾಣಿಕೆ ಸಂಗ್ರಹಿಸುವ ಮತ್ತು ನಾಲ್ಕು ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಡುವ ಸಂಸ್ಥೆಗಳು ಎಂಬ ಸಾಮಾನ್ಯರ ಕಲ್ಪನೆಯನ್ನು ಶ್ರೀಗಳ ವ್ಯಕ್ತಿತ್ವ ದೂರ ಮಾಡಿತ್ತು. ಸ್ವಾಮೀಜಿ ಆದವರು ಸಮಾಜಮುಖಿ ಯಾಗಿರಬೇಕು – ಎನ್ನುವ ಕಲ್ಪನೆ ನಮಗೆ ಬಂತು. ಅಂದಿನ ಸಮಾರಂಭದಲ್ಲಿ ನಿರಂತರವಾಗಿ ನಿಂತುಕೊಂಡೇ ಎಲ್ಲ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಫಲಕಗಳನ್ನು ವಿತರಿಸಿದರು. ಇಡೀ ವಿದ್ಯಾರ್ಥಿ ಸಮೂಹವನ್ನು ಕಿನ್ನರಿಜೋಗಿಯಂತೆ ಸೆಳೆದರು. ಕಾಲೇಜಿನ ವರ್ಷದ 'ಅತ್ಯುತ್ತಮ ವಾಗ್ಮಿ' ಎಂಬ ಪ್ರಶಸ್ತಿಯನ್ನು ಶ್ರೀಗಳ ಅಮೃತಹಸ್ತದಿಂದ ಪಡೆಯುವ ಭಾಗ್ಯ ನನ್ನದಾಗಿತ್ತು. ಶ್ರೀ ಸಿದ್ಧಗಂಗೆಗೆ ಭೇಟಿ ನೀಡಬೇಕು ಎಂಬ ಹಂಬಲ ಹುಟ್ಟಿದ್ದೇ ಅಂದು.

**ಶ್ರೀವಾಣಿ**

ಮನುಷ್ಯ ಪ್ರಪಂಚದಲ್ಲಿ ಸಂಘಜೀವಿಯಾಗಿ ಹುಟ್ಟುತ್ತಾನೆ. ಸಂಘಜೀವಿಯಾಗಿ ಬೆಳೆಯುತ್ತಾನೆ. ಸಂಘಜೀವಿಯಾಗಿಯೇ ವ್ಯವಹಾರ ಮಾಡುತ್ತಾನೆ, ಕೊನೆಗೆ ಸಂಘಜೀವಿಯಾಗಿಯೇ ಕೊನೆಗಾಣುತ್ತಾನೆ. ಹೀಗೆ ಹತ್ತು ಮಂದಿ ಮಧ್ಯೆ ಹುಟ್ಟಿ ಬೆಳೆದು ವ್ಯವಹಾರ ಮಾಡಿ ಕೊನೆಗಾಣುವುದು ಬಾಳು, ಈ ನಿಯಮ ಎಲ್ಲರಿಗೂ ಅನ್ವಯಿಸುವುದು.

೧೯೮೫ರಲ್ಲಿ ಬೆಂಗಳೂರಿಗೆ ಬಂದಾಗ ಆಕಸ್ಮಿಕವಾಗಿ ಸಿದ್ಧಗಂಗೆಯನ್ನು ನೋಡುವ ಭಾಗ್ಯ ಒದಗಿಬಂದಿತು. ಬಹುದಿನದ ಹಂಬಲ ಈಡೇರಿತು. ಅದೊಂದು ಬೆಳಗಿನ ಭೇಟಿ. ಪ್ರಶಾಂತ ವಾತಾವರಣ. ನನಗೆ ನಿಜವಾಗಿಯೂ ಪ್ರಾಚೀನ ಕಾಲದ ಬೃಹದ್ ಗುರುಕುಲಕ್ಕೆ ಹೋದ ಹಾಗಾಯಿತು. ಶಾಂತಿನಿಕೇತನಕ್ಕೆ ಭೇಟಿ ಕೊಟ್ಟಾಗ ಲಭಿಸದ ಶಾಂತಿ, ನೆಮ್ಮದಿ ಸಿದ್ಧಗಂಗೆಯಲ್ಲಿ ಲಭಿಸಿತು. ಸಿದ್ಧಗಂಗೆಯಲ್ಲಿ ಮಾತ್ರ ನಿಜವಾದ ಶಾಂತಿನಿಕೇತನದ ದರ್ಶನವಾಯಿತು.

೨೦೦೨ರಲ್ಲಿ ಗದಗನಿಂದ ತುಮಕೂರಿಗೆ ವರ್ಗವಾದಾಗ ಸಿದ್ಧಗಂಗೆಗೆ ಹತ್ತಿರಬಂದೆ ಎನಿಸಿತು. ಬಂದ ಎರಡೇ ದಿನಗಳಲ್ಲಿ ಕ್ಷೇತ್ರಕ್ಕೆ ಭೇಟಿನೀಡಿ ಶ್ರೀಗಳ ದರ್ಶನ ಪಡೆದೆ. ಮನಸ್ಸಿಗೆ ನೆಮ್ಮದಿ ಎನಿಸಿತು. ಇತ್ತೀಚಿನ ವರ್ಷಗಳಲ್ಲಿ ಸಿದ್ಧಗಂಗೆಯ ಖ್ಯಾತಿ ಬಹುಮುಖವಾಗಿ ಬೆಳೆದಿದೆ. ಇಹಕೆ ಬೇಕಾಗುವ ವಿದ್ಯೆಯನ್ನು ಪರಕೆ ಬೇಕಾಗುವ ಜ್ಞಾನವನ್ನು ಸಿದ್ಧಗಂಗೆ ನೀಡುತ್ತಲಿದೆ. ಧರ್ಮಪ್ರಸಾರದ ಜೊತೆ ವಿದ್ಯಾರ್ಥಿಗಳ ಲೌಕಿಕ ಪ್ರಪಂಚಕ್ಕೆ ಬೇಕಾಗುವ ಜ್ಞಾನವಿಜ್ಞಾನಗಳನ್ನು ನೀಡುವ ಮಹಾಕೇಂದ್ರವಾಗಿ ಸಿದ್ಧಗಂಗೆ ಬೆಳೆದಿದೆ. ನಾಡಿನ ಅನೇಕ ಜಿಲ್ಲೆಗಳಲ್ಲಿ ಅಲ್ಲದೆ ಈ ತುಮಕೂರು ಜಿಲ್ಲೆಯಲ್ಲಿ ಎಲ್ಲೇ ಹೋದರೂ ಶ್ರೀಮಠದ ವಿದ್ಯಾಸಂಸ್ಥೆಗಳು ಜ್ಞಾನದೇಗುಲಗಳಾಗಿ ವಿದ್ಯಾರ್ಥಿಗಳ ಬಾಳಿನಲ್ಲಿ ಬೆಳಕು ಬೀರುತ್ತಲಿವೆ. ಇಡೀ ಈ ಜಿಲ್ಲೆಯಲ್ಲಿ ಜ್ಞಾನದ ಬೀಜ ಬಿತ್ತಿ ಹೆಮ್ಮರವಾಗಿ ಬೆಳೆಯುವಂತೆ ಮಾಡಿದ ಕೀರ್ತಿ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರದು.

### *ಭಾವೈಕ್ಯತೆ-ನೈತಿಕ ಶಿಕ್ಷಣ*

ಇತ್ತೀಚೆಗೆ ಉಪನ್ಯಾಸಕ್ಕೆಂದು ಶ್ರೀಕ್ಷೇತ್ರಕ್ಕೆ ಹೋದಾಗ ಅಲ್ಲಿಯ ಶಿಸ್ತು ಕಂಡು ಆಶ್ಚರ್ಯವಾಯಿತು. ಸುಮಾರು ೮೦೦೦ ಕ್ಕಿಂತಲೂ ಹೆಚ್ಚು ವಿದ್ಯಾರ್ಥಿಗಳು ಕ್ಷಣಾರ್ಧದಲ್ಲಿ ಸಾಲುಸಾಲಾಗಿ ಯಾವುದೇ ಸದ್ದುಗದ್ದಲವಿಲ್ಲದೇ ಕುಳಿತುಕೊಂಡ ದೃಶ್ಯ ಚಿತ್ರದಲ್ಲಿ ಬರೆದಂತೆ ಇತ್ತು. ಉಪನ್ಯಾಸ ಮುಗಿದ ಮೇಲೆ ಹಲವಾರು ವಿದ್ಯಾರ್ಥಿಗಳು ಬಂದು ಭೇಟಿಯಾದರು. ಅವರಲ್ಲಿ ಕೆಲವರು ದೂರದ ವಿಜಾಪೂರ, ಗದಗ, ರಾಯಚೂರುಗಳಿಂದ ಬಂದವರು. ಶ್ರೀಗಳ ಕಾರುಣ್ಯ ಅಲ್ಲಿಯವರೆಗೆ ಹರಡಿದೆ. ನಾಡಿನಾದ್ಯಂತ ವಿದ್ಯಾರ್ಥಿಗಳು ಜಾತಿಭೇದವಿಲ್ಲದೇ ಇಲ್ಲಿಗೆ ಜ್ಞಾನಾರ್ಜನೆಗೆ ಬಂದಿದ್ದಾರೆ. ಯಾವುದೇ ತಾರತಮ್ಯವಿಲ್ಲ. ಇಲ್ಲಿಯ ಸಹಭೋಜನ ಮತ್ತು ಸಾಮೂಹಿಕ ಪ್ರಾರ್ಥನೆ ವಿದ್ಯಾರ್ಥಿಗಳಲ್ಲಿ ಭಾವೈಕ್ಯತೆ ಬೆಳೆಯಲು ದಾರಿಯಾಗಿದೆ. ಭಾವೈಕ್ಯತೆ ಇಂದು ದೇಶಕ್ಕೆ ಬೇಕಾಗಿರುವ ಅನನ್ಯ ಶಕ್ತಿ. ಇಲ್ಲಿಯ ವಿದ್ಯಾರ್ಥಿಗಳಲ್ಲಿ ನೈತಿಕತೆ


ದಾಸೋಹಕ್ಕೆ ಸಿದ್ಧವಾಗಿರುವ ಲಾಡುಗಳ ರಾಶಿ

**ಶ್ರೀವಾಣಿ**

ಪ್ರಗತಿ ಅರ್ಥವತ್ತಾಗಬೇಕಾದರೆ ಪ್ರಾಥಮಿಕ ಬಯಕೆಗಳು (Fundamental needs) ಪ್ರತಿ ವ್ಯಕ್ತಿಗೂ ಪೂರೈಕೆಯಾಗಬೇಕು. ಅಧಿಕವಾದ ವೈಭವಯುತ ಜೀವನ ಬೇಕಾಗಿಲ್ಲ, ಎರಡು ಹೊತ್ತು ನಿರಾಳ ಗಂಜಿಗೆ ಅವಕಾಶವಿದ್ದರೆ ಸಾಕು.



ಬೆಳಸುತ್ತಿದ್ದಾರೆ. ಶಿವಾನುಭವ ಗೋಷ್ಠಿಗಳು, ಪ್ರವಚನ, ವಚನಗಾಯನ, ಭಜನೆ, ಪ್ರಾರ್ಥನೆ, ಸತ್ಸಂಗಗಳಿಂದ ಇಲ್ಲಿಯ ವಾತಾವರಣ ನೈತಿಕತೆ ಬೆಳವಣಿಗೆಗೆ ಪೂರಕವಾಗಿದೆ. ಸಿದ್ಧಗಂಗೆಯಲ್ಲಿ ಸಮಾಜಕಟ್ಟುವ, ದೇಶಕಟ್ಟುವ ಕಾರ್ಯ ನಡೆದಿದೆ.

### *ಜ್ಞಾನಗಂಗೆ*

೮೦೦ ವರ್ಷಗಳ ಹಿಂದೆ ಜಗಜ್ಯೋತಿ ಬಸವಣ್ಣನವರು ತೋರಿದ ದಾರಿಯಲ್ಲಿ ಸಿದ್ಧಗಂಗೆ ನಡೆದಿದೆ. ''ಎಲ್ಲ ದೇವರು ಬಂದರೂ ಅನ್ನದೇವರು ಬರಲಿಲ್ಲ'' ಅನ್ನುತ್ತಾರೆ ಬೇಂದ್ರೆ. ಅನ್ನದೇವರ ಕೃಪೆ ಇಲ್ಲದೇ ಸರಸ್ವತಿಯನ್ನು ಒಲಿಸುವುದು ಕಷ್ಟ. ಹೀಗಾಗಿ ಎಷ್ಟೋ ವಿದ್ಯಾರ್ಥಿಗಳು ಜೀವನದಲ್ಲಿ ತಮ್ಮ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸುತ್ತಾರೆ. ವಿದ್ಯಾರ್ಥಿಗಳ ಬಾಳಿನಲ್ಲಿ ಇಂತಹ ಸಂದರ್ಭಗಳು ಬರದಿರಲಿ ಎಂದೇ ೮೦೦೦ ವಿದ್ಯಾರ್ಥಿಗಳಿಗೆ ಅನ್ನದಾಸೋಹ ನೀಡಿ, ವಸತಿ ಒದಗಿಸಿ, ವಿದ್ಯಾರ್ಜನೆಗೆ ದಾರಿ ಮಾಡಿಕೊಟ್ಟಿರುವ ಅದ್ಭುತ ಕಾರ್ಯವನ್ನು ಸಿದ್ಧಗಂಗೆಯಲ್ಲಿ ಶ್ರೀಗಳು ಕೈಕೊಂಡಿದ್ದಾರೆ. ಇದೊಂದು ಗಿನ್ನಿಸ ದಾಖಲೆಯಾಗ ಬಹುದೇನೊ? ಶ್ರೀಗಳಂತೂ ಈ ಭಾಗದಲ್ಲಿ ನಡೆದಾಡುವ ದೈವ. ಅನ್ನ ವಿದ್ಯೆ ಮತ್ತು ಜ್ಞಾನವನ್ನು ನೀಡುತ್ತ ತ್ರಿವಿಧ ದಾಸೋಹಮೂರ್ತಿಯಾಗಿದ್ದಾರೆ. ಕರ್ಮಯೋಗಿ ಆಗಿದ್ದಾರೆ. ಸಿದ್ಧಗಂಗೆಯಲ್ಲಿ ಜ್ಞಾನಗಂಗೆ ಹರಿಸಿದ್ದಾರೆ.


ಜಾತ್ರೆಯಲ್ಲಿ ವಿಜೇತ ರಾಸುಗಳು ಮತ್ತು ಮಾಲೀಕರೊಂದಿಗೆ ಪೂಜ್ಯ ಶ್ರೀಗಳವರು

### *ಕಾಲದ ಪರಿಪಾಲನೆ*

ಈ ಭಾಗದಲ್ಲಿ ನಡೆಯುವ ಎಲ್ಲ ಪ್ರಮುಖ ಸಾಂಸ್ಕೃತಿಕ ಮತ್ತು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಸಾಮಾನ್ಯವಾಗಿ ಶ್ರೀಗಳು ಸಾನ್ನಿಧ್ಯ ವಹಿಸುತ್ತಾರೆ. ವೇಳೆಯ ಪರಿಪಾಲನೆ ಶ್ರೀಗಳಿಂದ ಜನ ಕಲಿಯಬೇಕಾಗಿದೆ. ಈ ಭಾಗಕ್ಕೆ ಭೇಟಿ ನೀಡುವ ಯಾವುದೇ ರಾಜಕೀಯ ನಾಯಕರು, ಸಮಾಜ ಸೇವಕರು, ಸಾಹಿತಿ ಕಲಾವಿದರು ಸಿದ್ಧಗಂಗೆಗೆ ಭೇಟಿ ನೀಡಿ, ಶ್ರೀಗಳ ದರ್ಶನ ಪಡೆದೇ ಮುಂದೆ ಹೋಗುತ್ತಾರೆ. ಸಿದ್ಧಗಂಗೆಯನ್ನು ಎಲ್ಲವರ್ಗದವರನ್ನು ತನ್ನತ್ತ ಸೆಳೆಯುವ ಚುಂಬಕ ಶಕ್ತಿಯನ್ನಾಗಿ ಮಾರ್ಪಡಿಸಿದ್ದಾರೆ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು.

### *ಭಾರತರತ್ನ*

ಕಾಯಕ ಮತ್ತು ದಾಸೋಹಗಳ ಮೂರ್ತಸ್ವರೂಪವೇ ಆಗಿರುವ, ನೂರಾರು ಶೈಕ್ಷಣಿಕ ಸಂಸ್ಥೆಗಳ ಹೊಣೆಹೊತ್ತಿರುವ ಬೆಳಗಿನ ಮೂರು ಗಂಟೆಯಿಂದ ಮಧ್ಯರಾತ್ರಿಯವರೆಗೂ ಅಹರ್ನಿಶಿಯಾಗಿ ಕಾಯದಲ್ಲಿ ತೊಡಗಿರುವ ಈ ಕರ್ಮಯೋಗಿಗಳು ಬದುಕಿರುವ ಈ ಕಾಲದಲ್ಲಿ ನಾವೆಲ್ಲ ಬದುಕಿದ್ದೇವೆ ಎಂಬುದೇ ಒಂದು ಧನ್ಯತೆಯ ಅನುಭವ. ಇಂತಹ ಕರ್ಮಯೋಗಿಗೆ 'ಭಾರತರತ್ನ'ದಂತಹ ಗೌರವ ಸಲ್ಲಬೇಕು. ಭಾರತರತ್ನ ಪ್ರಶಸ್ತಿ ನೀಡುವುದರಿಂದ ಪೂಜ್ಯ ಶ್ರೀಗಳಿಗಿಂತ ಪ್ರಶಸ್ತಿಗೆ ಹೆಚ್ಚು ಘನತೆ, ಗೌರವ ಬರುತ್ತದೆ.

**ಶ್ರೀವಾಣಿ**

ಮಾತಿಗೆ ಮನೆ ಕಟ್ಟಿ ಬೆಳಗಿಸುವ, ಮನೆ ಸುಟ್ಟು ಬೂದಿಮಾಡುವ ಎರಡೂ ಶಕ್ತಿಗಳಿವೆ, ಇದನ್ನರಿತ ಮಾನವ ಮಾತನ್ನ ಮಾನವೀಯತೆಯಿಂದ ಬಾಳಲು ಸೃಷ್ಟ್ಯಾತ್ಮಕ ಶಕ್ತಿಯನ್ನಾಗಿ ಉಪಯೋಗಿಸಬೇಕು.

# ಧರ್ಮಜ್ಯೋತಿ

– ವಿ. ಪ್ರಕಾಶ ಪುನರೂರು
ಕಲ್ಪತರು ಗ್ರಾಮೀಣಬ್ಯಾಂಕ್,
ಪ್ರಧಾನ ಕಛೇರಿ, ತುಮಕೂರು.



'ತ್ಯಾಗದೆತ್ತರಕೆ ತೂಗಿ, ಮುಗಿಲು ಸುತ್ತವಿ ಬಾಗಿ, ನೆಲದ ಬದುಕಿಗೆ ಕರುಣೆ, ಕಾಯದಲ್ಲಿ ಕರಗಿ ಮಿರುಗುವ ವಿಭೂತಿ'' ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಜಿಯವರನ್ನು ಕುರಿತ ಹಿರಿಯ ಕವಿ ಶ್ರೀ ಚನ್ನವೀರ ಕಣವಿಯವರ ಈ ಮುತ್ತಿನಂಥ ಮಾತುಗಳು ಎಷ್ಟೊಂದು ಅರ್ಥಪೂರ್ಣ. ಹೌದು, ದೀನದುರ್ಬಲರ ಕರುಣಾನಿಧಿಯಾಗಿ, ಹಸಿದೊಡಲಿಗೆ ಅನ್ನದೇವರಾಗಿ, ಜಗದೊಳಿತ ಬಯಸುವ ಆಧ್ಯಾತ್ಮಗುರುವಾಗಿ, ನೊಂದವರ ಬಾಳಿನ ಬೆಳಕಾದ ತ್ಯಾಗಜೀವಿ, ವಾತ್ಸಲ್ಯಮೂರ್ತಿ ಸಿದ್ಧಗಂಗೆಯ ಸಿದ್ಧಪುರುಷ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಅವಿಶ್ರಾಂತ ಕರ್ಮಯೋಗಿ, ಆದರ್ಶ ಮಾನವತಾವಾದಿ. ದೇವಗಂಗೆ ಒಲಿದು ನಿಂತ ಪಾವನಭೂಮಿ ಸಿದ್ಧಗಂಗೆಯನ್ನು ಚೈತನ್ಯ ಚಿಲುಮೆಯ ಕಾಯಕಭೂಮಿಯನ್ನಾಗಿಸಿ, ಅನ್ನ, ಜ್ಞಾನ, ಧರ್ಮಯಜ್ಞವನ್ನು ನಿತ್ಯನಿರಂತರ ನಡೆಸುತ್ತಾ ಋಷಿಸದೃಶರಂತಿರುವ ಈ ಮಂಗಳಮೂರ್ತಿ ನಾಡಿನ ಹಿರಿಯ ರಸಚೇತನ. ನಾಡಿನ ಉದ್ದಗಲಕ್ಕೂ ಸಂಚರಿಸಿ ಧರ್ಮಸಂದೇಶವನ್ನು ನೀಡುತ್ತಿರುವ ಶ್ರೀಗಳ ಧಾರ್ಮಿಕ ಹಾಗೂ ಕಾಯಕನಿಷ್ಠೆ ಅನುಪಮವಾದದ್ದು. ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ಹಾಗೂ ಶೈಕ್ಷಣಿಕ ಭೂಪಟದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಉನ್ನತ ಸ್ಥಾನ ಕಲ್ಪಿಸಿಕೊಟ್ಟ ಈ ಧರ್ಮಜ್ಯೋತಿ ಈ ಶತಮಾನದ ಶಕಪುರುಷ!

ಇಂತಹ ಮಹಾಮಹಿಮ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರನ್ನೂ, ಅವರ ಕಾರ್ಯಕ್ಷೇತ್ರವನ್ನು ದರ್ಶಿಸಿ, ಪುನೀತನಾಗುವ ಮಹಾಭಾಗ್ಯ ನನ್ನದಾದುದು ಸುಮಾರು ಹದಿನೈದು ವರ್ಷಗಳ ಹಿಂದೆ. ಅದು ಉದ್ಯೋಗ ನಿಮಿತ್ತ ನಾನು ತುಮಕೂರಿಗೆ ಬಂದು ನೆಲಸಿದ ಸಂದರ್ಭ. ಅದುವರೆವಿಗೂ, ಪತ್ರಿಕೆಗಳಲ್ಲಿ, ಪುಸ್ತಕಗಳಲ್ಲಿ ಶ್ರೀ ಕ್ಷೇತ್ರದ ಬಗ್ಗೆ ಓದಿ ತಿಳಿದಿದ್ದ ನನಗೆ ನಾಡಿನ ಯುಗಪುರುಷ.

### ಶ್ರೀವಾಣಿ

ಪಾಶ್ಚಾತ್ಯರು ಕಾಲದ ಮಹತ್ವ ತಿಳಿದು ಅದಕ್ಕೆ ಬೆಲೆಕೊಟ್ಟು, ಅದರ ರಹಸ್ಯವನ್ನು ಅರಿತು ಪ್ರಗತಿ ಹೊಂದಿದರು. ಮಹಾತ್ಮರು, ದೊಡ್ಡವರು ಕಾಲದ ಮಹತ್ವ ತಿಳಿದು ದೊಡ್ಡವರಾದರು, ನಾವು ಅರಿಯದೆ ಹಿಂದೆ ಬಿದ್ದೆವು.



ಧರ್ಮಯೋಗಿ ಶ್ರೀ ಶ್ರೀಗಳನ್ನು ಕಣ್ಣಾರೆ ಕಂಡು ಧನ್ಯನಾಗುವ ಸುಯೋಗ ಲಭಿಸಿತು. ಅಂತೆಯೇ ಒಂದು ಸಂಜೆ ಸಿದ್ಧಗಂಗೆಯ ಆರಾಧ್ಯದೈವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ದರ್ಶನಮಾಡಿ ಹೊರಬಂದ ನಾನು ಅಲ್ಲಿ ಅಭೂತಪೂರ್ವ ದೃಶ್ಯವನ್ನು ಕಂಡು ಒಂದು ಕ್ಷಣ ಭಾವುಕನಾದೆ.

## *ಸರ್ವಧರ್ಮ ಸಮನ್ವಯತೆ*

ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೆಂಬ ಸರ್ವಧರ್ಮ ಸಮನ್ವಯದ ಮಹಾವೃಕ್ಷದಡಿಯಲ್ಲಿ ಅಪಾರ ಸಂಖ್ಯೆಯ ವಿದ್ಯಾರ್ಥಿಗಳು ಸಾಮೂಹಿಕ ಪ್ರಾರ್ಥನೆ ಮಾಡುತ್ತಿದ್ದರು. ಪುರಾಣ ಕಥೆಗಳಲ್ಲಿ ಮಾತ್ರವಷ್ಟೇ ಕೇಳುತ್ತಿದ್ದ ಋಷಿ, ಮುನಿಗಳ ಗುರುಕುಲದ ಸೌಂದರ್ಯವನ್ನೂ, ಗುರುಶಿಷ್ಯರ ಅಪೂರ್ವ ಬಾಂಧವ್ಯವನ್ನು ಶ್ರೀ ಕ್ಷೇತ್ರದಲ್ಲಿ ಪ್ರತ್ಯಕ್ಷ ಕಂಡು ಆನಂದಿಸಿದೆ.



ಪ್ರೀತಿ ವಾತ್ಸಲ್ಯದ ಮಹಾಪೂರ

ಸರ್ವಧರ್ಮ ಭಾವೈಕ್ಯ ಹಾಗೂ ಸರ್ವಸಮಾನತೆಯ ನಿತಿಯೊಂದಿಗೆ, ನಾಡಿನ ಭಾವೀ ಪ್ರಜೆಗಳಲ್ಲಿ ಶಿಸ್ತನ್ನು ಮೂಡಿಸುವ ಶ್ರೀ ಶ್ರೀಗಳ ಸಮತಾ ಭಾವನೆ, ದೂರದರ್ಶಿತ್ವ ಕಂಡು ಹಿರಿಯ ಕವಿಯೊಬ್ಬರ ಕವನದ ''ಸರ್ವಜನಾಂಗದ ಶಾಂತಿಯ ತೋಟ'' ಸಾಲುಗಳನ್ನು ನೆನಪಿಗೆ ಬಂದವು. ಸ್ವಲ್ಪ ದಿನಗಳಲ್ಲಿಯೇ ನನ್ನ ಬಾಳಿನ ಸುಕೃತದ ಫಲವೋ ಎಂಬಂತೆ. ಶ್ರೀ ಶ್ರೀಗಳ ಆಶೀರ್ವಚನದ ಜೊತೆಗೆ ಉಪನ್ಯಾಸವನ್ನು ಕೇಳುವ ಮತ್ತೊಂದು ಸುಯೋಗ. ಆಧ್ಯಾತ್ಮ ಸಂದೇಶದೊಂದಿಗೆ, ಪ್ರಸಕ್ತ ಸಾಮಾಜಿಕ ಹಾಗೂ ಇನ್ನಿತರ ಸಮಕಾಲೀನ ವಿಷಯಗಳ ಬಗ್ಗೆ ತಮ್ಮ ಕಂಚಿನ ಕಂಠದಿಂದ ನೀಡಿದ ಉಪನ್ಯಾಸ ಇಂದಿಗೂ ನನ್ನ ಮನಃ ಪಟಲದಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ. ಇಂತಹ ಶ್ರೇಷ್ಠ ದಾರ್ಶನಿಕರ ಸಾನ್ನಿಧ್ಯದಲ್ಲಿ, ಆಧ್ಯಾತ್ಮ ಪರಿಸರದಲ್ಲಿ ಜ್ಞಾನಾರ್ಜನೆ ಮಾಡುತ್ತಿರುವ ವಿದ್ಯಾರ್ಥಿಗಳು ಎಂತಹ ಪುಣ್ಯವಂತರು! ಶ್ರೀಗಳ ಕಾರುಣ್ಯ ಮತ್ತು ಮಾನವೀಯತೆಯ ಮಡಿಲಲ್ಲಿ ಬೆಳೆದ ವಿದ್ಯಾರ್ಥಿಗಳು ಉನ್ನತ ಹುದ್ದೆಯಲ್ಲಿದ್ದುಕೊಂಡು, ಶಿಷ್ಟಾಚಾರ, ಸದಾಚಾರ ಸಂಪನ್ನರಾಗಿ ಇಂದಿಗೂ ಕ್ಷೇತ್ರದ ಬಗ್ಗೆ ಭಕ್ತಿ ಗೌರವವನ್ನು ಹೊಂದಿರುವುದು ಶ್ರೀ ಸಿದ್ಧಗಂಗೆಯ ಪಾವಿತ್ರ್ಯತೆ ಮತ್ತು ಮಹತ್ವವನ್ನು ಪ್ರತಿಬಿಂಬಿಸುತ್ತದೆ.

ಪ್ರತಿಷ್ಠಿತ ಶ್ರೀ ಸಿದ್ಧಗಂಗಾ ತಾಂತ್ರಿಕ ವಿದ್ಯಾಸಂಸ್ಥೆ, ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾವಿದ್ಯಾಲಯ, ಹಲವಾರು ಪ್ರಾಥಮಿಕ ಮತ್ತು ಪ್ರೌಢಶಾಲೆಗಳು, ವಿವಿಧ ತರಬೇತಿ ಸಂಸ್ಥೆಗಳು, ಇವನ್ನೆಲ್ಲ ನೋಡಿದಾಗ ಶ್ರೀಗಳ ಶಿಕ್ಷಣ ಹಾಗೂ ಸಾಮಾಜಿಕ ಪ್ರೇಮ, ದಕ್ಷ ಮೇಲ್ವಿಚಾರಣೆ ಮತ್ತು ಕಿಂಚಿತ್ತು ಲೋಪವಿಲ್ಲದಂತೆ ಈ ಎಲ್ಲಾ ಸಂಸ್ಥೆಗಳನ್ನು ಮುನ್ನಡೆಸಿಕೊಂಡು ಹೋಗುತ್ತಿರುವ ಕರ್ತೃತ್ವಶಕ್ತಿಯ ಬಗ್ಗೆ ಬೆರಗಾಗುತ್ತದೆ. ಎಂತಹ ಅಸಾಧಾರಣ ಸಾಧನೆ!

''ಮಠ, ಮಂದಿರಗಳು ದೇವ ಸಾನ್ನಿಧ್ಯದೊಂದಿಗೆ, ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ಪೋಷಿಸುವ ನೆಲೆಗಳಾಗಬೇಕು. ಶಾಂತಿಯನ್ನರಸಿ ಬಂದವರಿಗೆ ನೆಮ್ಮದಿ ನೀಡುವ ತಾಣಗಳಾಗಬೇಕು. ಸರ್ವಧರ್ಮ ಸಮನ್ವಯವನ್ನು ಸಾರುವ ಭಾವೈಕ್ಯ ಕೇಂದ್ರಗಳಾಗಬೇಕು.'' ಇದು ಅನಾದಿ ಕಾಲದಿಂದಲೂ ನಮ್ಮ ಹಿರಿಯರು ಪಾಲಿಸಿ, ಪೋಷಿಸಿಕೊಂಡು ಬಂದ ಸತ್‌ಸಂಪ್ರದಾಯ, ಭವ್ಯಪರಂಪರೆ. ಈ ನಿಟ್ಟಿನಲ್ಲಿ ತಮ್ಮ ತಪೋನಿಷ್ಠೆ, ಕಾಯಕನಿಷ್ಠೆ ಹಾಗೂ ದಿವ್ಯ ಸಾಧನಾ ಶಕ್ತಿಯೊಂದಿಗೆ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ನಾಡಿನ ಧಾರ್ಮಿಕ ಕೇಂದ್ರಗಳ ಮುಕುಟಮಣಿಯಾಗಿದ್ದಾರೆ.

★

# ಪವಾಡ ಪುರುಷರು

– ಗಣಪತಿ ಹೆಗ್ಗಡೆ
ಪಯೋನಿಧಿ, ನೃಪತುಂಗ ಹೈಸ್ಕೂಲ್ ಎದುರು
ಮಾರುತಿ ನಗರ, ತುಮಕೂರು.

ಜಗತ್ತಿನ ಅನೇಕ ಸಾಂಸ್ಕೃತಿಕ ಇತಿಹಾಸದ ಘಟ್ಟಗಳಲ್ಲಿ ಅನೇಕ ದಾರ್ಶನಿಕರು, ಗುರುಗಳು ತಮ್ಮದೇ ಆದ ಕಾಣಿಕೆಯನ್ನು ನೀಡಿ ಅಜರಾಮರರಾಗಿದ್ದಾರೆ. ಅದರಲ್ಲಿ ನಮ್ಮ ಭಾರತದೇಶ ಅದ್ಭುತವಾದ ಕೊಡುಗೆಯನ್ನು ನೀಡಿದೆ. ಅದರ ನೆರಳನ್ನು ವೇದ ಪುರಾಣ ವಚನಗಳ ಪರಂಪರೆಯಲ್ಲಿ ಕಾಣುತ್ತೇವೆ. ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿಯೂ ಕೂಡ ಅದರ ಛಾಪುಗಳನ್ನು ಕಾಣುತ್ತೇವೆ. ಮನುಷ್ಯ ಅಡವಿಯಿಂದ ಅಥವಾ ಅಡವಿತನದಿಂದ ಮನುಜತನಕ್ಕೆ ಬರಬೇಕಾದರೆ ಓರ್ವ ಗುರುವಿನ ಅವಶ್ಯಕತೆ ಇದ್ದೇ ಇದೆ. ಆ ಗುರುವು ಭೌತಿಕವಾಗಿಯೋ ಅಥವಾ ಮಾನಸಿಕವಾಗಿಯೋ ಶಿಷ್ಯ ವೃಂದದ ಮೇಲೆ ಪ್ರಭಾವಬೀರಿ ಶಿಷ್ಯನು ಯೋಗ್ಯನಾಗಿ ಬದುಕುವಂತೆ ಮಾಡುತ್ತಾನೆ. ಪೂರ್ಣತೆಯ ಕಡೆ ಸಾಗಲು ಮಾರ್ಗದರ್ಶನ ನೀಡುತ್ತಾನೆ. ಗುರುಗಳಿಗೆ ಗುರುವಾಗಿ ಸತ್‌ಪರಂಪರೆಗೆ ಆದರ್ಶರಾಗಿ ಬೆಳಗುತ್ತಿರುವ ಸಿದ್ಧಗಂಗಾ ಕ್ಷೇತ್ರದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಒಂದು ಉಜ್ವಲ ನಿದರ್ಶನ.

ಧರ್ಮದ ಅನತಿಯ ಹಂತದಲ್ಲಿ ಓರ್ವ ದಾರ್ಶನಿಕ ಜನರಿಗೆ ಧರ್ಮದ ಬಗ್ಗೆ ಅರಿವನ್ನು ಮೂಡಿಸುತ್ತಾನೆ. ಸರಿಯಾದ ಮಾರ್ಗದರ್ಶನದಲ್ಲಿ ಮುನ್ನಡೆಯುವಂತೆ ಮಾಡುತ್ತಾನೆ. ಈ ಭವ್ಯ ಪರಂಪರೆಯಲ್ಲಿ ಬಂದವರು ಸಿದ್ಧಗಂಗೆಯ ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಜಿಯವರು. ಕಳೆದ ಏಳು ದಶಕಗಳಿಂದ ಶ್ರೀಮಠದಲ್ಲಿ ಮಹಾಕ್ರಾಂತಿಯನ್ನೇ ಮಾಡಿದ್ದಾರೆ. ಸಾವಿರಾರು ಬಡ ವಿದ್ಯಾರ್ಥಿಗಳಿಗೆ ಆಶ್ರಯನೀಡಿ ಅವರ ಬದುಕನ್ನು ಹಸನುಗೊಳಿಸಿದ್ದಾರೆ. ಅವರು ಒಬ್ಬ ಸಭ್ಯ, ಸುಸಂಸ್ಕೃತ ನಾಗರಿಕನಾಗಿ ಬದುಕುವಂತೆ ಮಾಡಿದ್ದಾರೆ. ಹಸಿದ ಹೊಟ್ಟೆಗೆ ಅನ್ನವನ್ನು ನೀಡಿ ಅರಿವಿನ ಜ್ಯೋತಿಯನ್ನು ಬೆಳಗಿಸಿದ್ದಾರೆ.

ಮಲೆನಾಡಿನ ಊರಿಂದ ಬಂದ ನಮ್ಮಜ್ಜ ತುಮಕೂರಿನಲ್ಲಿ ಯಾವುದಾದರೂ ಒಂದು ಯಾತ್ರಾಸ್ಥಳ ತೋರಿಸು ಎಂದಾಗ ಸಿದ್ಧಗಂಗೆಯನ್ನು ನಾನು ತೋರಿಸಿದೆ. ಅಂದು ಮಧ್ಯಾಹ್ನದ ಸಮಯ. ದಾಸೋಹದ ವಿವಿಧ ಹಂತಗಳನ್ನು ತೋರಿಸಿದೆ. ಸಂಜೆಯವರೆಗೂ ಶ್ರೀಮಠದ ಎಲ್ಲಾ ಭಾಗಗಳನ್ನು ತೋರಿಸಿದೆ. ಪ್ರಾರ್ಥನೆ ಮುಗಿಸಿ ತಂಡೋಪ ತಂಡವಾಗಿ ಹೋಗುತ್ತಿದ್ದ ವಿದ್ಯಾರ್ಥಿಗಳ ಸಮೂಹನೋಡಿ ನನ್ನಜ್ಜ ಮೂಗಿನ ಮೇಲೆ ಬೆರಳಿಟ್ಟು ತಾನು ತನ್ನ ೭೫ ವರ್ಷದ ಜೀವಿತಾವಧಿಯಲ್ಲಿ ಈ ರೀತಿ ಬಡವಿದ್ಯಾರ್ಥಿಗಳು ಬದುಕಿನ ಭರವಸೆ ಹೊತ್ತು ಆಶ್ರಯ ಪಡೆದಿರುವ ತಾಣವನ್ನು ನೋಡಲಿಲ್ಲವೆಂದು ಉದ್ಗರಿಸಿದರು. ಒಂದು ಸರ್ಕಾರ ಮಾಡಲಾಗದ ಕೆಲಸವನ್ನು ಓರ್ವ ಯೋಗಿಯಾಗಿರುವ ಪರಮಪೂಜ್ಯ ಶ್ರೀ ಶ್ರೀಗಳವರು ಸಲ್ಲಿಸುತ್ತಿರುವ ಸೇವೆಯನ್ನು ಕಂಡು ಆಶ್ಚರ್ಯ ವ್ಯಕ್ತಪಡಿಸಿದರು. ಅವರ ಸಾಧನೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಶ್ರೀಮಠದಲ್ಲಿ ವ್ಯಾಸಂಗ ಮಾಡಿದ ಲಕ್ಷಾಂತರ ಜನ ನಾಡಿನ, ದೇಶದ, ವಿಶ್ವದ ಮೂಲೆ ಮೂಲೆಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವುದನ್ನು ನಮ್ಮಜ್ಜನಿಗೆ ತಿಳಿಸಿದಾಗ ಅವರು ಇದೊಂದು ಪವಾಡವೆಂದು ಬಣ್ಣಿಸಿದರು.

ವಿದ್ಯಾರ್ಥಿಗೆ ಮಾರ್ಗದರ್ಶನ ನೀಡುತ್ತಿರುವ ಪೂಜ್ಯ ಶ್ರೀಗಳವರು

ಶ್ರೀಗಳು ತಮ್ಮ ಮಾರ್ಗದರ್ಶನದಲ್ಲಿ ನೀಡಿದ ನೀಡುತ್ತಿರುವ ವಿದ್ಯೆ ಒಂದಲ್ಲ ಎರಡಲ್ಲ. ವ್ಯಕ್ತಿತ್ವದ ಪರಿಪೂರ್ಣ ವಿಕಾಸಕ್ಕಾಗಿ ಸ್ಥಾಪಿಸಿದ ವಿರಾಟ್ ಸ್ವರೂಪಿ ವಿದ್ಯಾಸಂಸ್ಥೆಗಳು – ಕಾಲೇಜು ಶಿಕ್ಷಣ, ಪ್ರಾಥಮಿಕ, ಮಾಧ್ಯಮಿಕ, ಶಿಕ್ಷಣ ತರಬೇತಿ, ಹೊಲಿಗೆಯಿಂದ ಹಿಡಿದು ಇಂಜಿನೀಯರ್‌ವರೆಗೆ, ಜಾತ್ರೆ ವಸ್ತುಪ್ರದರ್ಶನ ಎಲ್ಲೆಡೆಯೂ ಬಾಹುಚಾಚಿದೆ. ಇವೆಲ್ಲ ವಿದ್ಯೆಯ ವಿರಾಟ್‌ರೂಪವೆ ಸರಿ. ಅಲ್ಲದೆ ಅಲ್ಲಿ ಜಾತಿ ಮತ ಬೇಧವಿಲ್ಲದೆ ನಡೆಯುವ ದಾಸೋಹವೇ ಸರ್ವಧರ್ಮ ಸಮನ್ವಯತೆಗೆ ಒಂದು ಜ್ವಲಂತ ನಿದರ್ಶನ.

ತುಮಕೂರು ಅಸುಪಾಸಿನ ಅಥವಾ ಕರ್ನಾಟಕದ ವಿವಿಧೆಡೆಗಳಲ್ಲಿ ಯಾವುದೇ ಜಾತಿಯ:ಧರ್ಮದವರು ಹೊಸ ಉದ್ಯಮ, ಅಂಗಡಿ ಮಳಿಗೆ ಪ್ರಾರಂಭಿಸುವುದಾದರೆ ಶ್ರೀಗಳ ಆಶೀರ್ವಾದ ಬಯಸಿ ಆಮಂತ್ರಿಸುತ್ತಾರೆ. ಭಕ್ತರು ಅವರ ಆಶೀರ್ವಾದದ ಶ್ರೀರಕ್ಷೆಯನ್ನು ಹೊತ್ತು ಪುನೀತರಾಗುತ್ತಾರೆ. ಭವಿಷ್ಯದ ಪ್ರಗತಿಯ ಮೆಟ್ಟಿಲುಗಳನ್ನು ಏರುತ್ತಾರೆ.

"ಅಡಿಯ ಮುಂದಿಡೆ ಸ್ವರ್ಗ" ಎಂಬಂತೆ ಶ್ರೀಗಳು ಅಡಿಯನ್ನು ಮುಂದಿಟ್ಟಂತೆ ನೂರಾರು ಶಿಷ್ಯಕೋಟಿಯ ಬದುಕು ಹಸನಾಗುತ್ತಿದೆ. ಆಶ್ರಯ ಪಡೆದವರು ಹೆಮ್ಮರವಾಗಿದ್ದಾರೆ. ಇಂತಹ ಕೈಂಕರ್ಯದಿಂದ ಆರ್ಥಿಕ ಮತ್ತು ಸಾಮಾಜಿಕ ಕ್ರಾಂತಿಯಾಗಿರುವುದರಲ್ಲಿ ಸಂಶಯವಿಲ್ಲ. ಕಾಯಕವೇ ಕೈಲಾಸ ಎಂಬ ಬಸವಣ್ಣನವರ ಆದರ್ಶಗಳನ್ನು ಚಾಚೂತಪ್ಪದೆ ಅನುಷ್ಠಾನಗೊಳಿಸುತ್ತಿರುವ ಪರಮಪೂಜ್ಯ ಶ್ರೀ ಶ್ರೀಗಳವರು ನಿಜಕ್ಕೂ ಪವಾಡ ಪುರುಷರು.

★

### ಶ್ರೀವಾಣಿ

ಪ್ರಪಂಚದಲ್ಲಿ ಬಹಳ ಮಂದಿ ಪರಿಪೂರ್ಣ ಜೀವನದ ಅರ್ಥಮಾಡಿಕೊಂಡಿಲ್ಲ, ಅಪರಿಪೂರ್ಣ ಜೀವನವನ್ನೇ ಪರಿಪೂರ್ಣ ಎಂಬ ಭ್ರಮೆ, ಭ್ರಾಂತಿಯ ಜೀವನವನ್ನು ನಡೆಸುತ್ತಿದ್ದಾರೆ. ಆದ್ದರಿಂದ ಪರಿಪೂರ್ಣ ಜೀವನದ ಅರ್ಥವನ್ನು ಮಾಡಿಕೊಳ್ಳುವುದು ಬಹಳ ಮುಖ್ಯವಾದುದು.



### ಶ್ರೀವಾಣಿ

ಮಾಂಸದ ಮುದ್ದೆ, ಕೀವು ರಕ್ತದ ಕುಡಿಕೆ, ಮೂತ್ರದ ಮಡಿಕೆ, ಎಲುಬಿನ
ಜೀವರಾಶಿಗಳಲ್ಲಿ ಮಾನವಜನ್ಮ ದೊಡ್ಡದು. ಅದನ್ನ ಕಡೆಗಾಣಿಸಬಾರದು. ಪಾಪದ ಫಲವೇ ಮಾನವಜನ್ಮ ಎಂಬ ಭಾವನೆಯನ್ನು ತಾಳಬಾರದು.
ಗೂಡು ಎಂದೆಲ್ಲಾ ತುಚ್ಛೀಕರಿಸಬಾರದು, ನಿಷ್ಕೃಷ್ಟವಾಗಿ ಕಾಣಬಾರದು. ಮಾನವ ಜನ್ಮವು ಸೃಷ್ಟಿಗೆ ಭಗವಂತನು ಕೊಟ್ಟ
ಮಾನವಜನ್ಮ ಭಗವಂತನ ಸೃಷ್ಟಿಯಲ್ಲಿ ಅದ್ಭುತವಾದುದು, ವಿಶಿಷ್ಟವಾದುದು, ಅತ್ಯಂತ ಶ್ರೇಷ್ಠವಾದುದು. ಇತರ ಪ್ರಾಣಿಗಳಿಗೆ ಕೊಡದ ಅನೇಕ ದಿವ್ಯ ಶಕ್ತಿಗಳನ್ನು ಕೊಟ್ಟಿದ್ದಾನೆ.
ಅತ್ಯಪೂರ್ವವಾದ ಅಮೂಲ್ಯ ಕಾಣಿಕೆಯೇ ಸರಿ. ಪರಮಾತ್ಮ ಮಾನವನಿಗೆ ಜೀವಕೋಟಿಗಳಲ್ಲಿ ಮೊದಲ ಸ್ಥಾನ. ಅಂತಹ ರತ್ನಪ್ರಾಯ ಜೀವನವನ್ನು ಉಳಿಸಿಕೊಂಡು,
ಆದ್ದರಿಂದ ಇವನ ಸ್ಥಾನ ಸೃಷ್ಟಿಯಲ್ಲಿ ಮಿಗಿಲು, ಅವನಿಗೆ ಅರ್ಥಮಾಡಿಕೊಳ್ಳುವುದು ಮಾನವನ ಪ್ರಥಮ ಕರ್ತವ್ಯ. ವಿಚಾರವಂತ ವಿಜ್ಞಾನಿಗಳು ಈ
ಬೆಳಸಿಕೊಂಡು ಸದ್ವಿನಿಯೋಗಪಡಿಸಬೇಕು. ಜೀವನವನ್ನು ಹಣಕ್ಕೊ, ಆಸ್ತಿಗೊ ಅಧಿಕಾರಕ್ಕೊ? ಯಾವುದಕ್ಕೆ ಎಂಬ ಅನೇಕ ವಿಚಾರಗಳು ತಲೆ
ಕಡೆ ಗಮನ ಹರಿಯಿಸಿದ್ದಾರೆ. ಮನುಷ್ಯ ಬಾಳುವುದು ಏಕೆ? ಭಗವಂತನ ಸಾಕ್ಷಾತ್ಕಾರಕ್ಕೆ ಮಾನವ ಜನ್ಮ ಒಂದು ಸಾಧನ.
ಎತ್ತಿ ಕೊನೆಗೆ ದೇಹ ಆತ್ಮದ ಪೀಠ ಎಂಬ ನಿಲುವಿಗೆ ಬಂದು ನಿಂತಿದ್ದಾರೆ.

# ಮಹಾಯೋಗಿ

– ಈರಪ್ಪ ಎಂ. ಕಂಬಳಿ
ಸಂಶೋಧನಾಧಿಕಾರಿ,
ಭಾಷಾಂತರ ನಿರ್ದೇಶನಾಲಯ,
ಕಾವೇರಿ ಭವನ, ಎಫ್-ಬ್ಲಾಕ್,
ಬೆಂಗಳೂರು – ೫೬೦ ೦೦೯.



**ಮೂ**ವತ್ತು ವರ್ಷದ ಕೆಳಗೆ. ಆಗಿನ್ನೂ ಹದಿಹರೆಯದ ನಾನು ಒಮ್ಮೆ ನೆಲೆ ತಪ್ಪಿದ ಹಕ್ಕಿಯಂತೆ ಹೋಗಿ ತುಮಕೂರು ಹತ್ತಿರದ ಸಿದ್ಧಗಂಗಾ ಮಠದಲ್ಲಿ ಒಂದು ರಾತ್ರಿ ತಂಗಬೇಕಾಗಿ ಬಂತು. ಬೆಳಿಗೆದ್ದು ನೋಡುತ್ತೇನೆ – ಬೆರಗು ಕಾದಿತ್ತು. ಬೆಟ್ಟದ ಬುಡದ ಅಂಗಳದಲ್ಲಿ ಕೆಂಪು ಸಮವಸ್ತ್ರದ ಎಳೆಯರು ಶಿಸ್ತಾಗಿ ಕೂತು ಪ್ರಾರ್ಥನೆ ಮಾಡುತ್ತಿದ್ದ ಅಪೂರ್ವ ದೃಶ್ಯ. ಸ್ವಲ್ಪ ಸಮಯದ ನಂತರ ಹಜಾರದಲ್ಲಿ ಹೈಸ್ಕೂಲು ಹುಡುಗರಿಗೆ ಪೂಜ್ಯ ಶ್ರೀಗಳವರು ಮೈಕಿನೆದುರು ಕೂತು ಪಾಠ ಹೇಳುತ್ತಿದ್ದಾರೆ. ಅನತಿ ದೂರದಲ್ಲಿ ನಿಂತು ಈ ದೃಶ್ಯವನ್ನು ಕಂಡು ವಿಸ್ಮಿತನಾದೆ. ಇತಿಹಾಸದ-ಪುರಾಣಗಳಗಳಲ್ಲಿ ಓದಿ ತಿಳಿದಿದ್ದ ಗುರುಕುಲದ ನೆನಪಾಯಿತು. ಗುರುಕುಲದ ಅನುಭವವಾಯಿತು. ಗುರುದೇವ ಕಟ್ಟಿದ ಶಾಂತಿನಿಕೇತನ ಹೀಗೇ ಇದ್ದಿರಬಹುದೇ ಎಂದೆಲ್ಲ ಕಲ್ಪಿಸಿಕೊಂಡೆ.

**ಅ**ಪ್ಪಟ ಗ್ರಾಮಾಂತರ ಪರಿಸರದ ಅಲ್ಲಿ, ಹಳ್ಳಿಯ ಮುಖಗಳ ಮುಂದೆ ಪೂಜ್ಯ ಶ್ರೀಗಳು ಪಾಠ ಮಾಡುತ್ತಿದ್ದುದ್ದು ಇಂಗ್ಲೀಷು! ಹತ್ತಿರದಲ್ಲಿ ಇದ್ದ ಪ್ರಸಾದ ನಿಲಯದಲ್ಲಿ ದೊಡ್ಡ ದೊಡ್ಡ ಕೊಪ್ಪರಿಗೆಗಳಲ್ಲಿ ಹಿಟ್ಟು ಬೇಯುತ್ತಿದ್ದ ವಾಸನೆ ಕಮ್ಮಗೆ ಹರಡಿತ್ತು. ಅಲ್ಲಿದ್ದ ಅಪರಿಮಿತ ವಿದ್ಯಾರ್ಥಿ ಸಮುದಾಯಕ್ಕಷ್ಟೇ ಅಲ್ಲ, ಯಾವ ಪೂರ್ವಸೂಚನೆ ನೀಡದೆ ಕ್ಷೇತ್ರದರ್ಶನಕ್ಕೆಂದು ಬರುವ ಅಸಂಖ್ಯಾತ ಪ್ರವಾಸಿಗರಿಗೂ ಅಲ್ಲಿ ಪಂಕ್ತಿಭೇದವಿಲ್ಲದೆ ನಿತ್ಯ ಪ್ರಸಾದ ವಿನಿಯೋಗವಾಗುತ್ತಿತ್ತು. ಇದು ನಾನು ಮೊದಲ ಸಲ ಕಂಡ ಸಿದ್ಧಗಂಗಾ ಕ್ಷೇತ್ರದ ದರ್ಶನ.

**ಭ**ವಿಷ್ಯದಲ್ಲಿ ಎಂಥೆಂಥವೂ ಹೆಮ್ಮರಗಳಾಗಿ ಬೆಳೆಯಬೇಕಾದ ಸಸಿಗಳಿಗೆ ನೀರು-ಗೊಬ್ಬರ ಇತ್ತು ಆರೈಕೆ ಮಾಡುವ ನರ್ಸರಿಯಂತೆ ತೋರಿತ್ತು ನನಗೆ – ಅಲ್ಲಿನ ಪ್ರಾತ್ಯಕ್ಷಿಕೆ. ಕುವೆಂಪು ಅವರ ''ಸರ್ವಜನಾಂಗದ ಶಾಂತಿಯ ತೋಟ'' ಅಂತಿತ್ತು, ಆ ಕ್ಷೇತ್ರ. ಈಗೀಗ ನಮ್ಮ ಸರ್ಕಾರ ಎಚ್ಚೆತ್ತು ಬಿಸಿಯೂಟದ ಆಸೆ ಹಚ್ಚಿ ಮಕ್ಕಳನ್ನು ಶಾಲೆಗೆ ಬರುವಂತೆ ಪುಸಲಾಯಿಸುವ ಯೋಜನೆ ರೂಪಿಸಿವೆ. ಆದರೆ, ಐವತ್ತು ಅರವತ್ತು ವರ್ಷಗಳಷ್ಟು ಹಿಂದೆಯೇ ಬಡ ಮಕ್ಕಳ 'ಹೊಟ್ಟೆ-ನೆತ್ತಿ' ನೋಡಿಕೊಂಡು ವಿದ್ಯಾವಂತ ಪ್ರಜೆಗಳನ್ನಾಗಿ ರೂಪಿಸುವ ಕನಸು ಕಂಡು ಅದನ್ನು ಸಾಕಾರಗೊಳಿಸಲು ಅಹೋರಾತ್ರಿ ಶ್ರಮಿಸುತ್ತಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಯಾವ ಪ್ರತಿಫಲಾಪೇಕ್ಷೆಯಿಲ್ಲದೆ ಮಾಡಿದ ಆ 'ಆರಂಭ'ದಿಂದಾಗಿ ಸಿದ್ಧಗಂಗೆ ಈಗ ಬಹುದೊಡ್ಡ ಕ್ಷೇತ್ರವಾಗಿ ಬೆಳೆದಿದೆ. ತ್ರಿವಿಧ ದಾಸೋಹಿಯಾಗಿ ಮುನ್ನಡೆಸಿದ ಈ ಕಾಯಕಯೋಗಿಗೆ ಈಗ ತೊಂಬತ್ತೇಳು ವರ್ಷ. ದಣಿವರಿಯದ ಆ ಯೋಗಿ ಶತಾಯುವಾಗುವತ್ತ ದಾಪುಗಾಲು ಹಾಕಿದ್ದಾರೆ. ಇದೇ ಪವಾಡ! ಇಂಥವರಿನ್ನೂ ನಮ್ಮ ನಡುವೆ ಇರುವುದೇ ಭುವನದ ಭಾಗ್ಯವೆನ್ನಬೇಕು!

**ಮ**ಹಾಯೋಗಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಮನುಕುಲದ ಏಳಿಗೆಗೆ ತಮ್ಮನ್ನು ಅರ್ಪಿಸಿಕೊಂಡು ನುಡಿದಂತೆ ನಡೆಯುತ್ತಾ ಮಾರ್ಗದರ್ಶನ ನೀಡುತ್ತಿರುವುದು ನಮ್ಮ ಭಾಗ್ಯ.

A sound mind is in sound body ಎಂದು ಹೇಳುತ್ತಾರೆ. ಹಾರ್ಡ್‌ವೇರ್ ಸುಸ್ಥಿತಿಯಲ್ಲಿದ್ದರೆ ತಾನೆ ಅದರ ಒಳಗಿನ ಸಾಫ್ಟ್‌ವೇರ್ ಸಿಸ್ಟಮ್ ಸರಿಯಾಗಿ ಕೆಲಸ ಮಾಡುವುದು? ಹಾಗೆಯೇ ಮನುಷ್ಯನ ಮೂಲಭೂತ ಅಗತ್ಯವಾದ ದೈಹಿಕ ಹಸಿವು ಹಿಂಗಿದ ನಂತರವೇ ಆ ಚೈತನ್ಯ ಬೌದ್ಧಿಕ ಆಲೋಚನೆಗೆ ತೊಡಿಸುವುದು. ಆ ಕಾರಣಕ್ಕಾಗಿಯೇ ಸಿದ್ಧಗಂಗೆಯಲ್ಲಿ ಹೊಟ್ಟೆಗೂ ಹಾಕಿ ಓದಲೂ ಹಚ್ಚಿ ಸತ್ಪ್ರಜೆಗಳನ್ನಾಗಿ ರೂಪಿಸುವ ವ್ಯವಸ್ಥೆ ಮಾಡಿದ್ದು – ಇಲ್ಲಿ ಗಮನಿಸಬೇಕಾದ ಸಂಗತಿ.

**ಜಾ**ತಿ ಜನಾಂಗದ ಭೇದಭಾವ ಎಣಿಸದೆ, ಎಲ್ಲಿಂದಲೇ ಬರಲಿ. ಪ್ರತಿವರ್ಷ ಸಾವಿರಾರು ಬಡ ಮಕ್ಕಳಿಗೆ ಆಶ್ರಯನೀಡಿ. 'ವಿದ್ಯೆ ಕಲಿಸುವ ತಂದೆ, ಬುದ್ಧಿ ಹೇಳುವ ಗುರುವು, ಬಿದ್ದಿರಲು ಬಂದು ನೋಡುವ ತಾಯಿಯೂ' ಆಗಿ ಸಲಹಿದ ಪರಿಣಾಮವಾಗಿ ಇಂದು ಲಕ್ಷಾಂತರ ವಿದ್ಯಾವಂತರು ತಮ್ಮ ಭವಿಷ್ಯ ಕಂಡುಕೊಂಡು ನಾಡಿನಲ್ಲಷ್ಟೇ ಅಲ್ಲ, ಪ್ರಪಂಚದಾದ್ಯಂತ ಚದುರಿ ಹೋಗಿರುವುದು ಬಹುದೊಡ್ಡ ಹೆಗ್ಗಳಿಕೆ. ಈ ಕಾರಣದಿಂದಲೇ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಸನ್ಯಾಸಿಯಾಗಿದ್ದರೂ ವಿಶ್ವಸಂಸಾರಿಯಾಗಿದ್ದಾರೆ!

**ಮ**ಠಾಧಿಪತಿಗಳು ಹೇಗಿರಬೇಕು ಎಂಬುದಕ್ಕೆ ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳವರು ಮಾರ್ಗದರ್ಶಕರಾಗಿದ್ದಾರೆ. ಆದರ್ಶವಾಗಿದ್ದಾರೆ, ಅಪರೂಪದ ಮಾದರಿಯಾಗಿದ್ದಾರೆ. ಶಿವಪೂಜೆಗೆ ಕುಳಿತಿರಲಿ, ವೇದಿಕೆಯ ಮೇಲೆ ಆಸೀನರಾಗಿರಲಿ ತುಸುವೂ ಮಿಸುಕಾಡದೆ ತಾಸುಗಟ್ಟಲೇ ಹಾಗೆ ನಡು ಬಾಗಿದಂತೆ ಕೂತ ಆ ಶರೀರಾಕಾರ– ಒಂದು ದೊಡ್ಡ ವಿಸ್ಮಯವೆಂಬಂತೆ ಗೋಚರಿಸುತ್ತದೆ.

## ಶ್ರೀವಾಣಿ

ರಾಷ್ಟ್ರ ಸ್ವಾತಂತ್ರ್ಯವೇ ಬದುಕಿನ ಚರಮಗಂತವ್ಯವಲ್ಲ, ಅಂಶ ಮಾತ್ರ, ಅಂಗಮಾತ್ರ. ರಾಷ್ಟ್ರ ಸ್ವಾತಂತ್ರ್ಯವನ್ನು ಜನಾಂಗದ ಉದ್ಧಾರಕ್ಕಾಗಿ, ವ್ಯಕ್ತಿಗಳ ವಿಕಾಸಕ್ಕಾಗಿ, ಪರಿಪೂರ್ಣ ಜೀವನ ಸಾಧನೆಯ ಯೋಗ್ಯ ವಾತಾವರಣಕ್ಕಾಗಿ ಬಳಸಿದಾಗ ಮಾತ್ರ ಅದು ಅರ್ಥವತ್ತಾಗುವುದು.

## ದಾರಿದೀಪವಾಗಲಿ

"ನನ್ನ ಮೆಚ್ಚುಗೆಗೆ, ಅತ್ಯಂತ ಮರ್ಯಾದೆಗೆ, ಗೌರವಕ್ಕೆ ಪಾತ್ರವಾಗಿರುವುದು ಈ ಸಾವಿರಾರು ಮಕ್ಕಳ ವಿದ್ಯಾಭ್ಯಾಸ. ಸ್ವಾಮಿ ನೀವು ಬಹಳ ಒಳ್ಳೆಯ ಕೆಲಸ ಮಾಡಿದ್ದೀರಿ, ನಾನು ನಿಮ್ಮ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡುತ್ತೇನೆ. ಈ ಮಕ್ಕಳು ಒಂದು ಜಾತಿಯವರಲ್ಲ, ಒಂದು ಕೋಮಿನವರಲ್ಲ, ಎಲ್ಲ ಜಾತಿಯವರು ಇದ್ದಾರೆ. ನಾನೊಂದು ದಿವಸ ಬಂದು ನೋಡಿದೆ. ಐದಾರು ಸಾವಿರ ಮಕ್ಕಳು ಸಮವಸ್ತ್ರದಿಂದ ಪ್ರಾರ್ಥನೆ ಮಾಡುತ್ತಿದ್ದರು. ನಾನು ಇವರೆಲ್ಲ ಯಾವ ಜಾತಿಯವರು ಎಂದು ವಿಚಾರ ಮಾಡಿದೆ. ಇಲ್ಲಿ ಲಿಂಗಾಯಿತರು ಇದ್ದಾರೆ, ಬ್ರಾಹ್ಮಣರು ಇದ್ದಾರೆ, ಮುಸಲ್ಮಾನರು ಇದ್ದಾರೆ, ಕ್ರಿಶ್ಚಿಯನ್ನರು ಇದ್ದಾರೆ, ಕುರುಬರು ಇದ್ದಾರೆ, ಗೊಲ್ಲರು ಇದ್ದಾರೆ. ಹೀಗೆ ನಮ್ಮಲ್ಲಿ ಯಾವ ಯಾವ ಜಾತಿಗಳಿವೆಯೋ ಅವರೆಲ್ಲರೂ ಇದ್ದಾರೆ ಎಂದು ಹೇಳಿದರು. ಆಗ ನನ್ನ ಹೃದಯ ತುಂಬಿ ಬಂತು. ಮನಸ್ಸು ಸಂತೋಷ ಪಟ್ಟಿತು. ಇಂತಹ ಒಂದು ದೃಶ್ಯ ನಾನು ಎಲ್ಲಿಯೂ ನೋಡಿಲ್ಲ. ಇದನ್ನು ಮೆಚ್ಚಿ ನಾವೆಲ್ಲ ಇಲ್ಲಿ (ವಜ್ರಮಹೋತ್ಸವ - ೧೯೬೭) ಸೇರಿದ್ದೇವೆ. ತಾವು ನಿರಂತರವಾಗಿ ನಡೆಸಿಕೊಂಡು ಬಂದಿರುವ ಈ ಕೆಲಸ ಹೀಗೆಯೇ ಮುಂದುವರಿಯಲಿ. ಇವೊತ್ತು ವಜ್ರಮಹೊತ್ಸವವನ್ನು ಮಾಡುತ್ತಿದ್ದೇವೆ. ಅದನ್ನು ಅತ್ಯಂತ ಹೆಮ್ಮೆಯಿಂದ, ಭಕ್ತಿಯಿಂದ ಮಾಡುತ್ತಿದ್ದೇವೆ. ತಾವು ಇನ್ನೂ ಬಹುಕಾಲ ಇರಿ - ನಮ್ಮ ರಾಷ್ಟ್ರಕ್ಕೆ ದಾರಿದೀಪವಾಗಿ. ಜಾತೀಯತೆ ಹೋಗಿ ಎಲ್ಲರೂ ಒಂದಾಗಬೇಕು ಏನು ನೀವು ಪಾಠವನ್ನು ಕಲಿಸಿದ್ದೀರಿ. ಅದು ಎಲ್ಲ ಮಠಗಳಲ್ಲಿ ಹರಡಲಿ, ದೇಶದಲ್ಲಿ ಹರಡಲಿ. ಜನ ಒಂದಾಗಲಿ. ಒಂದು ರಾಷ್ಟ್ರವಾಗಲಿ. ಒಗ್ಗಟ್ಟಿನಿಂದ ಕೆಲಸ ಮಾಡತಕ್ಕಂಥ ಒಂದು ರಾಷ್ಟ್ರವಾಗಲಿ ಎನ್ನುವುದನ್ನು ತಾವು ತೋರಿಸಿಕೊಟ್ಟಿದ್ದೀರಿ.....ಇಲ್ಲೊಬ್ಬ ಸಾಧಕ, ಒಬ್ಬ ಸನ್ಯಾಸಿ ನಮಗೋಸ್ಕರ ಹೋರಾಟ ನಡೆಸಿ ಸಮಾಜವನ್ನು ಮೇಲೆತ್ತುವುದಕ್ಕೆ ಪ್ರಯತ್ನಪಟ್ಟಿದ್ದಾರೆ. ಸಾಕಷ್ಟು ಮಟ್ಟಿಗೆ ಸಾಧನೆಯಾಗಿದೆ.....ಸ್ವಾಮಿಗಳ ಜೀವನ ಎಲ್ಲರಿಗೆ ದಾರಿದೀಪ ವಾಗಲಿ.''

- ಎಸ್. ನಿಜಲಿಂಗಪ್ಪ
ಕರ್ನಾಟಕದ ಮಾಜಿ ಮುಖ್ಯಮಂತ್ರಿ

## ಶ್ರೀವಾಣಿ

ಯಾವುದನ್ನು ಪಡೆದರೆ ಜಗತ್ತಿನ ಸಕಲವೂ ಸುಲಭವಾಗಿ ದೊರಕುವುದೊ ಅಂತಹ ಭಗವಂತನ ಸಾಕ್ಷಾತ್ಕಾರ ಪಡೆದುದೇ ಪರಿಪೂರ್ಣ ಜೀವನ.

ತುಂಬಿದ ಸಭೆಯಲ್ಲಿ ಮಹಾಮೌನಿಯಾಗಿದ್ದು ಕಣ್ಮುಚ್ಚಿ ಯೋಗನಿದ್ರೆಯಲ್ಲಿ ಮುಳುಗಿದ್ದಂತೆ ಭಾಸವಾದರೂ ಜ್ಞಾನೇಂದ್ರಿಯಗಳೆಲ್ಲ ಎಚ್ಚರವಾಗಿದ್ದು ಎಲ್ಲರ ಮಾತುಗಳನ್ನು ಗ್ರಹಿಸುವ ಚುರುಕುತನ ಈಗಲೂ ಇದೆ. ಕನ್ನಡಕವಿಲ್ಲದೆ ಪತ್ರಿಕೆ ಓದುವ ದೃಷ್ಟಿ ಸಾಮರ್ಥ್ಯವನ್ನು ಈ ವಯಸ್ಸಿನಲ್ಲೂ ಉಳಿಸಿ ಕೊಂಡಿದ್ದಾರೆ. ದೇಹ ಮತ್ತು ಮನಸ್ಸುಗಳ ಆರೋಗ್ಯವನ್ನು ಅವರು ಕಾಪಾಡಿಕೊಂಡು ಬಂದ ರೀತಿ ನಿಜಕ್ಕೂ ಅಚ್ಚರಿ ಹುಟ್ಟಿಸುತ್ತದಲ್ಲವೆ? ಅವರು ನೀಡುವ ಒಂದೊಂದು ನುಡಿಗಳೂ ಅನುಭಾವದ ಕಿರಣಗಳು. 'ಈ ದೇಹವು ಈಶ್ವರನ ಪ್ರಸಾದಕಾಯ. ಅದನ್ನು ಕೆಡಿಸ ಬಾರದು. ಅನಾರೋಗ್ಯಗೊಳಿಸಿಕೊಳ್ಳಬಾರದು. ವೃದ್ಧ್ಯಾಪ್ಯದಲ್ಲಿ ಶೈಥಿಲ್ಯಗೊಳ್ಳುವುದು ದೇಹಧರ್ಮ. ಆದರೆ, ಆಕಾಲದಲ್ಲಿ ಅದು ಕರ್ತವ್ಯ ಕರ್ಮಗಳನ್ನು ಮಾಡುವ ಪಟುತ್ವ ಕಳೆದುಕೊಳ್ಳಬಾರದು. ಸದಾ ಪಟುವಾಗರಿಬೇಕು. ರೋಗಾದಿಗಳಗೆ ತುತ್ತಾಗದ ಹಾಗೆ ಅದನ್ನು ನೋಡಿಕೊಳ್ಳುವುದೂ ಒಂದು ಪೂಜೆಯೇ' ಎಂಬ ನುಡಿಮುತ್ತು ಸದಾ ನಮಗೆ ದಾರಿದೀಪ ಗಳಾಗಿದೆ.

ಸಿದ್ಧಗಂಗೆಯನ್ನು ಸುಕ್ಷೇತ್ರವನ್ನಾಗಿಸುವಲ್ಲಿ, ಇಷ್ಟು ಎತ್ತರಕ್ಕೆ ಕಟ್ಟಿ ನಿಲ್ಲಿಸುವಲ್ಲಿ ಅವರು ಮಾಡಿದ ಸಾಧನೆ, ತಪಸ್ಸು ಸಣ್ಣಪ್ರಮಾಣದ್ದಲ್ಲ.

ಅವರ ವ್ಯಕ್ತಿತ್ವವನ್ನು ನಾಡಿನ ಹಿರಿಯ ಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ಚಿತ್ರಿಸಿದ ಪರಿ ಇಂತಿದೆ:

*ಸದ್ದುಗದ್ದಲವಿರದ ಸಾಧನೆ ಗದ್ದುಗೆಯೇರಿದೆ*
*ಕಾಯಕವೆ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ*
*ಕಾವಿಯುಡಿಗೆಯನುಟ್ಟು ನಭವೆ ಕಿರಣ ಹಸ್ತವ ಚಾಚಿದೆ*
*ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರೆದಿದೆ*

ಈಗಾಗಲೇ ಸಜ್ಜುಗೊಳ್ಳುತ್ತಲಿರುವ ಅವರ ಜನ್ಮಶತಮಾನೋತ್ಸವ ಸಮಾರಂಭವನ್ನು ಅವರ ಸಾನ್ನಿಧ್ಯದಲ್ಲಿಯೇ ಈ ನಾಡು ಕಣ್ತುಂಬ ನೋಡುವಂತಾಗಲಿ. ಬದುಕಿದ್ದಾಗಲೇ ಒಂದು ದಂತಕತೆಯಾಗಿರುವ ಈ ಯೋಗಿಯ ಆದರ್ಶ ಈ ಶತಮಾನಕ್ಕೆ ದಾರಿದೀಪವಾಗಲಿ.

★

## ಅಸಾಮಾನ್ಯ ನೋಟ

ನಾಡಿನ ಮೂಲೆ ಮೂಲೆಗಳಿಂದ ಅನಾಥ'ರನ್ನು ಬರಮಾಡಿಕೊಂಡು, ಅವರಿಗೆಲ್ಲ ಅನ್ನದಾನದ ಜತೆಯಲ್ಲಿ ಜ್ಞಾನವನ್ನೂ ದಾನಮಾಡುತ್ತಿರುವ ದೃಶ್ಯವಂತೂ ನನ್ನ ಪಾಲಿಗೆ ಅಸಾಮಾನ್ಯ ನೋಟವೆನಿಸಿದೆ. ಅಸಂಖ್ಯಾತ ಬಡಬಗ್ಗರ ಇಹದ ಅವಶ್ಯಕತೆಗಳನ್ನು ಪೂರೈಸುತ್ತಿರುವುದು ಮಾತ್ರವಲ್ಲ, ಅವರ 'ಪರ'ವನ್ನು ಸಹ ಈ ತಾವಿಗೆ ಋಣಿಯನ್ನಾಗಿ ಮಾಡುತ್ತಿರುವ ಕರ್ಮಭೂಮಿ ಇದಾಗಿದೆ.

- ಡಾ. ಕೆ. ಶಿವರಾಮ ಕಾರಂತ
ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು

## ಸಿದ್ಧಗಂಗಾಮಠದ ಶಿವಯೋಗಿ



*ಸಿದ್ಧಗಂಗಾಮಠದ ಶುದ್ಧ ಸಾತ್ವಿಕಶಕ್ತಿ*
*ಪರಮ ನಿರ್ಮಲ ಜ್ಯೋತಿ ರೂಪಕಂಡೆ*
*ಶಿವಕುಮಾರ ಶಿವಯೋಗಿ ಪರಿಪೂರ್ಣ ವರಯೋಗಿ*
*ಸಿದ್ಧಬೆಟ್ಟದ ಶಿಖರ ಮುಕುರಕಂಡೆ*

*ವೀರಶೈವಾಚಾರ ಪರಮಜ್ಞಾನದ ಸಾರ*
*ತೇರು ಎಳೆದಿದೆ ಮೇರು ಯೋಗಶಕ್ತಿ*
*ಲಿಂಗಬೆಳಗಿನ ಬೆಳಗು ಜಂಗಮದ ಹೊಂಬೆಳಗು*
*ಸಾಧನೆಯ ಸುಕ್ಷೇತ್ರ ಪ್ರೇಮಶಕ್ತಿ*

*ಹತ್ತುಸಾವಿರದಾಚೆ ವಿದ್ಯಾರ್ಥಿವೃಂದಕ್ಕೆ*
*ದಿನನಿತ್ಯ ದಾಸೋಹ ಎಂಥಹ ಪುಣ್ಯ*
*ತ್ರಿವಿಧ ದಾಸೋಹ ಪ್ರತ್ಯಕ್ಷವಾಗಿಹುದು*
*ಭಾರತದ ಉತ್ಕೃಷ್ಟ ಧರ್ಮಕಾರ್ಯ*

*ಅದ್ಭುತದ ವ್ಯಕ್ತಿತ್ವ ನಿಸ್ಸೀಮ ಚಾರಿತ್ರ*
*ಶಿವನ ನಂಬಿದ ಮೇಲೆ ಕೋಟಿಶಕ್ತಿ*
*ಕ್ರಿಯಾ ಜಂಗಮಶಕ್ತಿ ಕಾಯಕದ ಚಿನ್ಮೂರ್ತಿ*
*ಶಿವನ ದಾರಿಯೆ ದಾರಿ ದೇವಶಕ್ತಿ*

*ವರುಷ ತೊಂಬತ್ತಾರು ತುಂಬಿಹುದು ದೇಹಕ್ಕೆ*
*ಅಂತರಂಗದಿ ನೋಡು ಸಿಡಿಲಶಕ್ತಿ*
*ಬರಲಿ ನೂರರ ಮೇರು ಮನುಕುಲಕ್ಕೆ ಚಿರಸ್ಫೂರ್ತಿ*
*ಸಕಲ ನಾಡಿನ ಗುಡಿಗೆ ತಾಯಿಶಕ್ತಿ.*

*– ಡಾ. ಶ್ರೀ ಮೂಜಗಂ*
*ಹುಬ್ಬಳ್ಳಿ ಮೂರುಸಾವಿರಮಠ*

*(೨೦೦೩ರ ಜನವರಿ ೨೮ರಂದು*
*ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಸಂದರ್ಶಿಸಿ ಬರೆದುದು)*



# ಶ್ರೀ ಮಠದ ಶ್ರೀರಕ್ಷೆ

– ವೆಂಕಟರಮಣಯ್ಯ
ನಿವೃತ್ತ ಮುಖ್ಯೋಪಾಧ್ಯಾಯರು,
ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ,
ಹನುಮಂತಪುರ, ತುಮಕೂರು

ಶ್ರೀಸಿದ್ಧಗಂಗಾಮಠವು ತ್ರಿವಿಧ ದಾಸೋಹಕ್ಕೆ ಹೆಸರುವಾಸಿಯಾಗಿದ್ದು, ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಉದ್ದಾನ ಶಿವಯೋಗಿಗಳ ನಂತರ ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಿಶಾಲ ದೃಷ್ಟಿಯ ಫಲವಾಗಿ ಎಲ್ಲಾ ಜಾತಿ, ಮತ, ಧರ್ಮಗಳ ಬಡವಿದ್ಯಾರ್ಥಿಗಳು ಅಶನ, ವಸತಿಗಳನ್ನು ಪಡೆದು



ಗುರುಕಾರುಣ್ಯದ ಕಿರಣ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು,
ಉತ್ತರಾಧಿಕಾರಿಗಳು, ಶ್ರೀ ಸಿದ್ಧಗಂಗಾಮಠ

ವಿದ್ಯಾವಂತರಾಗಿ ಸಾಂಸ್ಕೃತಿಕ, ನೈತಿಕ ಹಾಗೂ ದೈವಭಕ್ತರಾಗಿ ಜೀವನವನ್ನು ರೂಪಿಸಿಕೊಂಡಿರುತ್ತಾರೆ. ಶ್ರೀಮಠದಲ್ಲಿ ಆಶ್ರಯ ಪಡೆದು ಭವಿಷ್ಯವನ್ನು ರೂಪಿಸಿಕೊಂಡ ವಿದ್ಯಾರ್ಥಿಗಳಲ್ಲಿ ಉಪ್ಪಿನಕೊಳಗದ ಒಕ್ಕಲಿಗರ ವಿದ್ಯಾರ್ಥಿಗಳೂ ಸೇರಿದ್ದಾರೆ. ಈ ಉಪ್ಪಿನಕೊಳಗೆದ ಒಕ್ಕಲಿಗರು ಒಕ್ಕಲಿಗ ಜನಾಂಗದಲ್ಲಿಯೇ ಅತ್ಯಂತ ಹಿಂದುಳಿದ ಹಾಗೂ ಅಲ್ಪ ಸಂಖ್ಯಾತರಾಗಿದ್ದಾರೆ.

ಈ ಜನಾಂಗದವರು ಆಂಧ್ರಪ್ರದೇಶದ ಮಡಕಶಿರ, ಹಿಂದೂಪುರ ತಾಲ್ಲೂಕುಗಳಲ್ಲಿಯೂ ಹಾಗೂ ಕರ್ನಾಟಕದ ತುಮಕೂರು ಮತ್ತು ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ. ನನಗೆ ತಿಳಿದ ಮಟ್ಟಿಗೆ ಪೂಜ್ಯಪಾದರವರ ಕೃಪಾಶೀರ್ವಾದ ಈ ಜನಾಂಗದ ವಿದ್ಯಾರ್ಥಿಗಳಿಗೆ ದೊರೆಯದೆ ಹೋಗಿದ್ದರೆ ಅವರ ಭವಿಷ್ಯ ಕಮರಿ ಹೋಗುತ್ತಿತ್ತು ಎಂಬುದು ಸೂರ್ಯನಷ್ಟೇ ಸತ್ಯ. ಇವರಿಗೆ ಶ್ರೀ ಸಿದ್ಧಗಂಗಾ ಮಠದ ಹೊರತು ಬೇರೆ ಯಾವುದೇ ಮಠಗಳ ಆಶ್ರಯವಿಲ್ಲ.

ಶ್ರೀ ಸಿದ್ಧಗಂಗಾಮಠದ ಸಂಸ್ಥೆಯಲ್ಲಿ ಉಪ್ಪಿನಕೊಳಗದ ಒಕ್ಕಲಿಗ ಬಂಧುಗಳು ಶಿಕ್ಷಣವನ್ನು ಪಡೆದು ಶ್ರೀಕ್ಷೇತ್ರದ ಶಿಕ್ಷಣ ಸಂಸ್ಥೆಯಲ್ಲಿಯೇ ಅನೇಕರು ಉದ್ಯೋಗಾವಕಾಶಗಳನ್ನು ಪಡೆದು ತಮ್ಮ ಭವಿಷ್ಯವನ್ನು ರೂಪಿಸಿಕೊಂಡಿದ್ದಾರೆ.

ಶ್ರೀಕ್ಷೇತ್ರದ ಶಿಕ್ಷಣ ಸಂಸ್ಥೆಗಳಾದ ತಾಂತ್ರಿಕ ಕಾಲೇಜು, ಫಾರ್ಮಸಿ ಕಾಲೇಜು, ಪ್ರಥಮದರ್ಜೆ ಕಾಲೇಜು, ಟಿ.ಸಿ.ಹೆಚ್. ಕಾಲೇಜು ಹಾಗೂ ಬಿ.ಇಡಿ., ಕಾಲೇಜುಗಳಲ್ಲಿ ಓದಿದ ವಿವಿಧ ಇಲಾಖೆಗಳಲ್ಲಿ ಉನ್ನತ ಹುದ್ದೆಗಳನ್ನು ಹೊಂದಿ ದಕ್ಷತೆಯಿಂದ ನಿರ್ವಹಿಸುತ್ತಿದ್ದಾರೆ.

ಶ್ರೀಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಲಿಯಿದ್ದು, ಈ ನಾಟಕ ಮಂಡಲಿಯಲ್ಲಿ ಅಭಿನಯಿಸಲು ಈ

## ಶ್ರೀವಾಣಿ

ಪ್ರಾಣಕ್ಕೆ ಸಮಾನವಾದುದು ಅಭಿಮಾನ, ಅಭಿಮಾನ ಎಂದರೆ ಅಹಂಕಾರ ಎಂದು ಅರ್ಥವಲ್ಲ. ಅಹಂಕಾರ ಕೆಟ್ಟದ್ದು. ಅದನ್ನು ಪೋಷಿಸಬಾರದು. ಅಭಿಮಾನ ಎಂದರೆ ಆತ್ಮ ಶ್ರದ್ಧೆ. ಆತ್ಮಗೌರವದಿಂದ ಬಾಳಬೇಕು. ಆತ್ಮಗೌರವ ಹೋದರೆ ಮರಣ ಪ್ರಾಯ.

ಜನಾಂಗದವರಿಗೂ ಕೂಡ ಪೂಜ್ಯ ಪಾದರು ಅವಕಾಶ ಮಾಡಿಕೊಟ್ಟಿರುತ್ತಾರೆ. ಈ ಕಲಾವೃಂದದ ಮೂಲಕ ಅಭಿನಯಿಸಲ್ಪಟ್ಟ ಭಕ್ತ ಮಾರ್ಕಂಡೇಯ, ಶಿವಜಲಂಧರ, ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕಗಳು ಬಹಳ ಪ್ರಸಿದ್ಧವಾದವುಗಳಾಗಿವೆ. ಈ ಕಲಾತಂಡದಲ್ಲಿ ಕಲಾಸೇವೆಯನ್ನು ಮಾಡುವ ಅವಕಾಶವನ್ನು ಶ್ರೀಪಾದರು ಕಲ್ಪಿಸಿಕೊಟ್ಟಿರುವುದು ನಮ್ಮ ಸುದೈವ ಎಂದು ಭಾವಿಸಿದ್ದೇನೆ.

ಶ್ರೀಕ್ಷೇತ್ರದಲ್ಲಿ ನಡೆಯುವ ಜಾತ್ರೆ, ಉತ್ಸವ, ಸಭೆ-ಸಮಾರಂಭಗಳಲ್ಲಿ ನಮ್ಮ ಜನಾಂಗದವರು ಭಾಗವಹಿಸಿ ಸೇವೆ ಸಲ್ಲಿಸುತ್ತಿರುವುದನ್ನು ಈ ಸಂದರ್ಭದಲ್ಲಿ ಪ್ರಸ್ತಾಪಿಸಲು ಅಭಿಮಾನವೆನಿಸುತ್ತದೆ. ಜಾತ್ರೆಗೆ ಬರುವ ಲಕ್ಷೋಪಲಕ್ಷ ಭಕ್ತಾದಿಗಳಿಗೆ ಪರಮಪೂಜ್ಯರು ಅನ್ನಸಂತರ್ಪಣೆಯನ್ನು ಏರ್ಪಡಿಸುವುದು ಸರ್ವರಿಗೂ ತಿಳಿದ ವಿಚಾರವೇ ಆಗಿದೆ. ಈ ಸಂದರ್ಭದಲ್ಲಿ ಜನಾಂಗದ ಹಿರಿಯರಾದ, ಕೀರ್ತಿಶೇಷ ಬೆಳಗುಂಬದ ಸಂಜೀವಯ್ಯನವರು, ಹಾಗೂ ಚೈಚೇನಹಳ್ಳಿಯ ಮುದ್ದುರಂಗಪ್ಪನವರು ಶ್ರೀಮಠದ ಅಡಿಗೆಗಾಗಿ ಸೌದೆಯನ್ನು ಹಳ್ಳಿ ಹಳ್ಳಿಗಳಿಗೆ ಹೋಗಿ ಕೂಡಿಸಿಕೊಡುವ ಕಾರ್ಯದಲ್ಲಿ ಭಾಗವಹಿಸುತ್ತಿದ್ದರು.

''ಗುರುವಿನ ಗುಲಾಮನಾಗುವತನಕ ದೊರಕದಣ್ಣ ಮುಕುತಿ ಎಂಬ'' ಪುರಂದರದಾಸರ ನುಡಿಯಂತೆ ನಮ್ಮ ಜನಾಂಗದವರು ಶ್ರೀ ಸಿದ್ಧಗಂಗಾಮಠ ಹಾಗೂ ಪರಮಪೂಜ್ಯರ ಬಗ್ಗೆ ಶ್ರದ್ಧೆ, ಭಕ್ತಿ, ಗೌರವವನ್ನು ಇಟ್ಟಿದ್ದಾರೆ.

ಉಪ್ಪಿನಕೊಳಗದ ಒಕ್ಕಲಿಗರ ವಿದ್ಯಾರ್ಥಿನಿಲಯದಲ್ಲಿ ಉಚಿತ ಭೋಜನ ವ್ಯವಸ್ಥೆಯನ್ನು ತುಮಕೂರಿನಲ್ಲಿ ಪೂಜ್ಯಪಾದರ ಅಮೃತಹಸ್ತದಿಂದ ಪ್ರಾರಂಭಿಸಲಾಯಿತು. ಈ ಕಾರ್ಯವು ಅವರ ಕೃಪಾಶೀರ್ವಾದದಿಂದ ನಿರಾತಂಕವಾಗಿ ನಡೆದುಕೊಂಡು ಹೋಗುತ್ತಿದೆ.

ತಾ. ೨೭.೨.೨೦೦೪ರ ಶುಕ್ರವಾರ ತುಮಕೂರು ತಾಲ್ಲೂಕು ಲಿಂಗಾಪುರದಲ್ಲಿ ನಮ್ಮ ಕುಲ ದೇವತೆಯಾದ ಶ್ರೀ ಕೊಳಗ ಲಕ್ಷ್ಮೀ ದೇವಸ್ಥಾನದ ಶಂಕುಸ್ಥಾಪನಾ ಕಾರ್ಯವನ್ನು ಪೂಜ್ಯಪಾದರ ಅಮೃತಹಸ್ತದಿಂದಲೇ ನೆರವೇರಿಸಲಾಯಿತು. ಪೂಜ್ಯಪಾದರು ನಮ್ಮ ಜನಾಂಗದ ಮೇಲೆ ಅಭಿಮಾನವನ್ನಿಟ್ಟು ನಮ್ಮ ಎಲ್ಲಾ ಕಾರ್ಯಗಳಲ್ಲಿಯೂ ಭಾಗವಹಿಸಿ ಆಶೀರ್ವದಿಸುತ್ತಿರುವುದು ನಮ್ಮ ಸುದೈವದ ಸಂಗತಿ.

ಶ್ರೀಸಿದ್ಧಗಂಗಾ ಮಠವು ಇಡೀ ವಿಶ್ವದಲ್ಲಿಯೇ ಭೂಕೈಲಾಸವಾಗಿದೆ. ಅನ್ನದಾಸ, ವಿದ್ಯಾದಾನದೊಂದಿಗೆ ವಿಶ್ವಮಾನ್ಯವಾದ ಬಸವ ತತ್ವಗಳನ್ನು ಅಳವಡಿಸಿಕೊಂಡಿರುವ ಆಧುನಿಕ ಬಸವಣ್ಣನೆಂದೇ ಪ್ರಖ್ಯಾತರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳು ಹಳ್ಳಿ ಹಳ್ಳಿಗಳಿಗೂ ಹೋಗಿ ''ಶ್ರೀ ಜಗಜ್ಯೋತಿ ಬಸವೇಶ್ವರ'' ನಾಟಕ ಮೂಲಕ ಪ್ರಚಾರ ಮಾಡುತ್ತಿರುವುದು ನಮ್ಮೆಲ್ಲರ ಭಾಗ್ಯ. ಕಾಯಕವೇ ಕೈಲಾಸ, ದೇವನೊಬ್ಬ ನಾಮಹಲವು, ಮಾನವ ಕುಲವೊಂದೇ ಎಂಬ ಉದಾತ್ತ ತತ್ವಗಳನ್ನು ಸಾರುತ್ತಾ ಇಡೀ ಮನುಕುಲದ ಉದ್ಧಾರ ಕಾರ್ಯದಲ್ಲಿ ಪೂಜ್ಯಪಾದರು ತಮ್ಮನ್ನು ತೊಡಗಿಸಿಕೊಂಡಿರುವ ವಿಷಯ ಜನನಿತವಾಗಿದೆ. ★

ಗಣೇಶನ ಹಬ್ಬದಲ್ಲಿ ಪ್ರಸಾದಕ್ಕೆ ಸಿದ್ದವಾಗಿರುವ ಕಡುಬಿನ ರಾಶಿ

**ಶ್ರೀವಾಣಿ**

ಮನುಷ್ಯ ಹೇಡಿಯಾಗಿ ಬಾಳಬಾರದು. ತನ್ನ ಗೌರವ, ತನ್ನ ಜನ, ತನ್ನ ದೇಶದ ಗೌರವ ಕಾಪಾಡಲು ಸದಾ ಪ್ರಯತ್ನಿಸಬೇಕು. ಅದೊಂದು ಕಾರ್ಯಕ್ಕೆ ಯಾವ ಅಡ್ಡಿ ಬಂದರೂ ಹೆದರಬೇಕಾಗಿಲ್ಲ.





# ಮಾತೃವಾತ್ಸಲ್ಯ

– ಕಲಾಶ್ರೀ
ಕ್ರಿಕೇಟ್ ಸ್ಟೇಡಿಯಂ ಮುಂಭಾಗ,
ತುಮಕೂರು.

''ಕಾಯಕವೇ ಕೈಲಾಸ'' ಎಂದಿರುವ ಕ್ರಾಂತಿಕಾರಿ ಬಸವಣ್ಣನವರ ನುಡಿಯನ್ನು ಅಕ್ಷರಶಃ ಅರ್ಥೈಸಿ ನಿಜವಾಗಿಸಿರುವವರು, ಆಧುನಿಕ ಬಸವಣ್ಣನವರೆನಿಸಿದ ನಮ್ಮೆಲ್ಲರ ಅಚ್ಚುಮೆಚ್ಚಿನ ಆರಾಧ್ಯದೈವ ಶ್ರೀ ಸಿದ್ಧಗಂಗಾ ಮಠಾಧೀಶರಾದ ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, 'ನಡೆದಾಡುವ ದೈವವೆಂದೇ ಪ್ರಖ್ಯಾತರಾಗಿದ್ದಾರೆ. ತ್ರಿವಿಧ ದಾಸೋಹಿಯಾಗಿರುವ ಶ್ರೀಗಳವರು ಶ್ರೀಕ್ಷೇತ್ರದ ಖ್ಯಾತಿಯನ್ನು ರಾಜ್ಯ, ರಾಷ್ಟ್ರ ಹಾಗೂ ಅಂತರರಾಷ್ಟ್ರಮಟ್ಟಕ್ಕೆ ಕೊಂಡೊಯ್ದಿದ್ದಾರೆ.

ದಾಸೋಹದ ಮಹಾಮನೆಯ ಒಲೆಯಲ್ಲಿನ ಬೆಂಕಿಯನ್ನು ನೂರಾರು ವರ್ಷಗಳಿಂದ ನಂದದೆ ಇರುವಂತೆ ಕಾಪಾಡಿಕೊಂಡು ಬಂದಿರುವ ಇವರು ನಿರಂತರ ಅನ್ನದಾನ ನಡೆಸುತ್ತಿದ್ದಾರೆ. ಜಾತ್ರೆ ವೇಳೆಯಲ್ಲಿ ಬರುವ ಭಕ್ತಾದಿಗಳಿಗೆ ಯಾವುದೇ ರೀತಿಯ ಊಟ ವಸತಿಗಳಿಗೆ ತೊಂದರೆಯಾಗದಂತೆ ನಿಗಾವಹಿಸುತ್ತಾರೆ. ಪ್ರತಿವರುಷ ಜಾತ್ರಾ ಸಂದರ್ಭದಲ್ಲಿ ಈ ಮಹಾತ್ಮರು ಈ ಚೈತನ್ಯ ರಾಜಬೀದಿಯಲ್ಲಿ ನಡೆದಾಗ ಶಿವನೇ ಪ್ರತ್ಯಕ್ಷನಾಗಿ ಭಿಕ್ಷೆಕ್ಕೆ ಬಂದಂತಿರುತ್ತದೆ.

'ಶಿವನು ಭಿಕ್ಷಕೆ ಬಂದ ನೀಡುಬಾರೆ ತಂಗಿ ನೋಡುಬಾರೆ'' ಎಂದು ಎಲ್ಲರೂ ತಂತಮ್ಮ ಶಕ್ತ್ಯಾನುಸಾರ ದಾನ ನೀಡುವರು. ಯಾರೇ ಶ್ರೀಕ್ಷೇತ್ರಕ್ಕೆ ಬರಲಿ ಬಡವ, ಬಲ್ಲಿದರೆಂಬ ತಾರತಮ್ಯ ತೋರದೆ ಶ್ರೀಗಳು ಹಸನ್ಮುಖರಾಗಿ ''ಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿಕೊಂಡು ಹೋಗಿ' ಎಂಬ ನುಡಿ ಬಂದವರಿಗೆ ಮಾತೃ ವಾತ್ಸಲ್ಯದಂತಿರುತ್ತದೆ. ತೌರಿಗೆ ಬಂದ ಹೆಣ್ಣುಮಕ್ಕಳಿಗೆ ತಾಯ್ನುಡಿಯಂತಿರುತ್ತದೆ.

ಸ್ವತಃ ತಾವೇ ಉಗ್ರಾಣ, ದಾಸೋಹ, ಕೊಟ್ಟಿಗೆ, ಕಣ ಹೊಲಗದ್ದೆ ತೋಟ ಇತ್ಯಾದಿ ಎಲ್ಲ ಕಡೆ ಎಲ್ಲದರ ಮೇಲ್ವಿಚಾರಣೆ ನಡೆಸುವುದು, ಪ್ರತಿನಿತ್ಯ ಮಕ್ಕಳ ಪ್ರಾರ್ಥನೆಯಲ್ಲಿ ಭಾಗವಹಿಸುತ್ತ ನಿರಂತರ ದುಡಿವ ಕರ್ಮಯೋಗಿಗಳಾಗಿದ್ದಾರೆ.

'ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ'. ಒಬ್ಬ ಹೆಣ್ಣು ಮಗಳು ವಿದ್ಯಾವಂತಳಾದರೆ ಇಡೀ ಕುಟುಂಬವೇ ವಿದ್ಯಾವಂತ ಕುಟುಂಬವಾಗುತ್ತದೆ' ಎನ್ನುವುದನ್ನು ಮನಗಂಡ ಶ್ರೀಗಳು, ವಾಹನ ಸೌಕರ್ಯಗಳೇ ಇಲ್ಲದಂತಹ ಕುಗ್ರಾಮಗಳಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸ ಸ್ಥಗಿತವಾಗದಂತೆ ಮಾಡಲು ಪ್ರೌಢಶಾಲೆಗಳನ್ನು, ಪದವಿಪೂರ್ವ ಕಾಲೇಜುಗಳನ್ನು ಗ್ರಾಮಾಂತರ ಪ್ರದೇಶದ ಹೆಣ್ಣು ಮಕ್ಕಳ ಶೈಕ್ಷಣಿಕ ಪ್ರಗತಿಗೆ ಕಾರಣರಾಗಿದ್ದಾರೆ.

ವಿದ್ವಾಂಸರೂ, ಸಾಹಿತ್ಯ ಚಿಂತಕರೂ ಆಗಿರುವ ಪರಮಪೂಜ್ಯರು ೧೯೬೩ರಲ್ಲಿ ಅಭೂತಪೂರ್ವವಾಗಿ ಶ್ರೀ ಕ್ಷೇತ್ರದಲ್ಲಿ ಅಖಿಲ ಭಾರತ ಸಾಹಿತ್ಯ ಸಮ್ಮೇಳನವನ್ನು ನಡೆಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ನೊಂದು ದುಃಖಿತಪ್ತರಾಗಿ ಬಳಿಬಂದಂತಹವರಿಗೆ ಚಿಂತಿಸಬೇಡಿ, ಹೆದರಬೇಡಿ, ಸಿದ್ಧಲಿಂಗನಿದ್ದಾನೆ. ಅವನು ಕಾಯುತ್ತಾನೆ. ಧೈರ್ಯವಾಗಿರಿ'' ಎಂದು ಸಾಂತ್ವನ ನೀಡುತ್ತಾರೆ.

ಜಗತ್ತು ಇಂದು ವಿನಾಶದಂಚಿನತ್ತ ಸಾಗುತ್ತಿದೆ. ಇದನ್ನುಳಿಸಲು ಸಮರ್ಥರಾದವರೆಂದರೆ ತಾಯಿ ಮತ್ತು ಗುರು ಇಬ್ಬರೇ. ಇವರಿಂದ ಮಾತ್ರ ಜಗತ್ತನ್ನುಳಿಸಲು ಸಾಧ್ಯ'' ಎಂದು ಹೇಳುವ ಶ್ರೀಗಳು ಹೆಣ್ಣು ತಾಯಾಗಿಯೂ, ಗುರುವಾಗಿ ಕಾರ್ಯನಿರ್ವಹಿಸುವ ಪರಿಸರ ಒದಗಿಸಿದ್ದಾರೆ.

ಪ್ರತಿನಿತ್ಯ ಸುಮಾರು ಎಂಟು ಸಾವಿರಕ್ಕೂ ಹೆಚ್ಚು ಮಕ್ಕಳಿಗೆ ಆಶ್ರಯ ನೀಡಿರುವುದು ಸಾಮಾನ್ಯವಾದುದೇನಲ್ಲ. ರಾಜ್ಯದ ಮೂಲೆ ಮೂಲೆಗಳಿಂದ ಬಂದಿರುವ ಇಂತಹ ಪವಾಡ ಸದೃಶ ಕಾರ್ಯಗಳು ಮಹಾಚೈತನ್ಯಮೂರ್ತಿಗಳಿಗೆ ಮಾತ್ರ ಸಾಧ್ಯವಾಗಿದೆ.

ಶಿಕ್ಷಣಕ್ಷೇತ್ರದಲ್ಲಿ ತುಮಕೂರು ಜಿಲ್ಲೆಯನ್ನು ಅತ್ಯುನ್ನತ ಮಟ್ಟಕ್ಕೇರಿಸಿರುವ ಹಿರಿಮೆ ಕೀರ್ತಿ ಶ್ರೀಗುರುಗಳದ್ದಾಗಿದೆ, ತರಬೇತಿ ಸಂಸ್ಥೆಗಳು, ತಾಂತ್ರಿಕ ಕಾಲೇಜುಗಳು ಡಿಪ್ಲೋಮಾ, ಇಂಜಿನಿಯರಿಂಗ್, ಕಲ್ಯಾಣಮಂಟಪಗಳು ಇತ್ಯಾದಿ, ಇತ್ಯಾದಿ ಶ್ರೀಗಳ ಸಾಧನೆಯ ಹಿರಿಮೆಗೊಂದು ಹೊನ್ನಗರಿಯಾಗಿ ಮೂಡಿದೆ. ನೋಡು ನೋಡುತ್ತಿದ್ದಂತೆ ಶ್ರೀಶಕ್ತಿ ತ್ರಿವಿಕ್ರಮನಂತೆ ಬೆಳೆದು ನಿಂತಿದೆ. ★

**ಶ್ರೀವಾಣಿ**

ಮಾತನ್ನ ಮಂತ್ರವಾಗಿ ಉಪಯೋಗಿಸಬೇಕು.

## ಶ್ರೀವಾಣಿ

### ಸ್ವಾತಂತ್ರ್ಯದ ಮೌಲ್ಯಗಳು

ಭರತಖಂಡಕ್ಕೆ ಸ್ವಾತಂತ್ರ್ಯ ಲಭಿಸಿ, ಅನೇಕ ವರ್ಷಗಳು ಸಂದಿವೆ. ಕಷ್ಟಪಟ್ಟು ಸಂಪಾದಿಸಿದ ಸ್ವಾತಂತ್ರ್ಯದ ಪ್ರಯೋಜನವೇನು? ಎಂಬ ಪ್ರಶ್ನೆ ಅರ್ಥವಾಗಬೇಕಾದರೆ, ಸ್ವಾತಂತ್ರ್ಯ ಪೂರ್ವ ಇದ್ದ ಜೀವನ ವ್ಯವಸ್ಥೆಯನ್ನು, ಅರ್ಥಮಾಡಿಕೊಂಡಾಗ ಮಾತ್ರ ಸಾಧ್ಯ. ಒಬ್ಬ ಆಂಗ್ಲ ವಿಚಾರವಾದಿ ಸ್ವಾತಂತ್ರ್ಯದ ಮೌಲ್ಯವನ್ನು ಕುರಿತು ಹೀಗೆ ವಿಚಾರಮಾಡಿದ್ದಾನೆ. ''ಯಾವ ರಾಷ್ಟ್ರದಲ್ಲಿ ಸಂಪತ್ತು ಇದ್ದು ಅನುಕೂಲವು ಇದ್ದು ಸ್ವಾತಂತ್ರ್ಯವಿರುವುದಿಲ್ಲವೋ, ಅದು ಬಡ ರಾಷ್ಟ್ರವೆನಿಸುತ್ತದೆ. ಆದರೆ ಯಾವ ರಾಷ್ಟ್ರ ಸಂಪತ್ತಿಲ್ಲದೆ, ಬಡತನದಿಂದ ಕೂಡಿದ್ದರೂ ಸ್ವಾತಂತ್ರ್ಯ ಪಡೆದುಕೊಂಡಿರುತ್ತದೆಯೋ ಅದು ಸಂಪದ್ಭರಿತ ರಾಷ್ಟ್ರವೆನಿಸುತ್ತದೆ''.

ಪ್ರತಿಯೊಂದು ಪಶು ಪಕ್ಷಿಗಳೂ ಕೂಡ, ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತವೆ ಎನ್ನುವುದಕ್ಕೆ ಒಂದು ನಡೆದ ಪ್ರಸಂಗ. ಒಮ್ಮೆ ಮೈಸೂರಿನ ದೊಡ್ಡ ಮಹಾರಾಜರು, ಕಾಕನಕೋಟೆಯಲ್ಲಿ ಆನೆಗಳನ್ನು ಬಂಧಿಸಿದರು. ಅವುಗಳಲ್ಲಿ ಒಂದು ಸಲಗ, ತನಗೆ ಸ್ವಾತಂತ್ರ್ಯ ಹೋಯಿತೆಂಬ ಭಾವನೆಯಿಂದ ಆಹಾರಾದಿಗಳನ್ನು ತೆಗೆದುಕೊಳ್ಳದೆ ಉಪವಾಸ ಮಾಡಿ ದಿನೇ ದಿನೇ ಕೃಶವಾಯಿತು. ಮಹಾರಾಜರು ಬಂದು ನೋಡಿ, ಅದಕ್ಕೆ ಪ್ರಿಯವಾದ ಆಹಾರವನ್ನು ಕೊಡಲು ಅಪ್ಪಣೆ ಮಾಡಿದರು. ಅವರೂ ಅದು ಆಹಾರವನ್ನು ತೆಗೆದುಕೊಳ್ಳದೆ ಉಪವಾಸವನ್ನು ಮುಂದುವರಿಸಿತು. ಹೀಗೆ ಹತ್ತು ದಿನಗಳು ಕಳೆದು ಹನ್ನೊಂದನೆಯ ದಿನ ಪ್ರಾಣಬಿಟ್ಟಿತು. ಅದನ್ನು ಕಂಡ ಮಹಾರಾಜರಿಗೆ ಕಣ್ಣಲ್ಲಿ ನೀರೂರಿತು. ಆಗ ಅವರು ಒಂದು ಮಾತು ಹೇಳಿದರು. ''ಎಲೈ ಗಜರಾಜ ! ಮನುಷ್ಯನಿಗಿಂತಲೂ ನೀನು ಸ್ವಾತಂತ್ರ್ಯದ ಬೆಲೆಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಿಯೆ. ಬುದ್ಧಿಶಕ್ತಿಯಲ್ಲಿಯೂ ಪ್ರಾಣಿಗಳಿಗಿಂತಲೂ ಮೇಲಾದ ಮನುಷ್ಯ, ಈ ಸ್ವಾತಂತ್ರ್ಯದ ಬೆಲೆಯನ್ನು ಅರ್ಥಮಾಡಿಕೊಂಡಿಲ್ಲ ವಲ್ಲಾ!'' ಎಂದು.

ಈ ಪ್ರಸಂಗ ಏನೇ ಇರಲಿ, ಸ್ವಾತಂತ್ರ್ಯ ಅರ್ಥವಾಗಬೇಕಾದರೆ, ದೇಶದ ಪ್ರತಿಯೊಬ್ಬ ವ್ಯಕ್ತಿಯೂ, ದೇಶಪ್ರೇಮವನ್ನು ಬೆಳೆಸಿಕೊಳ್ಳಬೇಕು. ಈ ಘನ ವ್ಯಕ್ತಿತ್ವನ್ನು ರೂಪಿಸಿಕೊಂಡಾಗ ಮಾತ್ರ ಸಾಧ್ಯ. ಅದೇ ಅವನು ದೇಶಕ್ಕೆ ಶ್ರೇಷ್ಠ ಕೊಡುಗೆಯೂ ಆಗುತ್ತದೆ.

### ಆತ್ಮಗೌರವ

ಆತ್ಮಗೌರವ ಜೀವನದ ಒಂದು ಮಹಾತತ್ತ್ವ ಬದುಕಿನಲ್ಲಿ ಏನೆಲ್ಲಾ ಸುಲಭವಾಗಿ ಸಂಪಾದನೆ ಮಾಡಬಹುದು, ಸುಲಭವಾಗಿ ಕಳೆಯಲೂಬಹುದು. ಆತ್ಮಗೌರವ ಸುಲಭಸಾಧ್ಯವಿಲ್ಲ. ಅಂದರೆ ತನ್ನ ತನದ ಸಂಪಾದನೆ. ಸಂಪಾದನೆ ಎಂದ ಕೂಡಲೆ ದೇಹ ದಂಡನೆ ಅತ್ಯಾವಶ್ಯಕ, ವ್ಯವಸ್ಥಿತ ಕಾರ್ಯಯೋಜನೆ ಅತಿಮುಖ್ಯ ಕಾರ್ಯಸಾಧನೆಯಲ್ಲಿ ದೃಢಸಂಕಲ್ಪ, ಧೈರ್ಯ ಸ್ಥೈರ್ಯಗಳು ಬೇಕು. ಇಷ್ಟಾದರೂ ಸಾಲದು. ಗುರುಕೃಪೆ, ದೈವಾನುಗ್ರಹವಿರಬೇಕು. ಹಿತಕರ ವಾತಾವರಣ ಕೂಡಿಬರಬೇಕು. ಇಷ್ಟೆಲ್ಲಾ ಕೂಡಿಬಂದರೂ ''ಶ್ರೇಯಾಂಸಿ ಬಹುವಿಘ್ನಾನಿ'' ಎಂಬಂತೆ ವಿಘ್ನ ಪರಂಪರೆ ಅಡ್ಡನಿಲ್ಲುತ್ತವೆ. ಆಶೆ, ಆಮಿಷ, ರೋಷ ವಿಷಯಾದಿ ಗಳೆಲ್ಲಾ ತಮ್ಮ ಶಕ್ತಿಪ್ರದರ್ಶನ ಮಾಡಲು ಹವಣಿಸುತ್ತಿರುತ್ತವೆ. ಇಲ್ಲಿ ವ್ಯಕ್ತಿಯ ನಿಜವಾದ ಅಂತಸತ್ವ ಹೊರಬೀಳುತ್ತದೆ. ತನ್ನತನ ಪ್ರಕಟವಾಗುತ್ತದೆ. ಸಹನೆ, ತಾಳ್ಮೆ, ಜಾಗೃತಿಗಳು ಕ್ರಿಯಾಶೀಲವಾಗಬೇಕು. ಹೊಡೆತ ಬಡಿತಗಳು ಸಂಸ್ಕಾರದ ಪೆಟ್ಟುಗಳೆಂದು ಭಾವಿಸಬೇಕು. ಹಾಗಾದಾಗ ಬದುಕಿನಲ್ಲಿ ಜಯ ಲಭ್ಯವಾಗುತ್ತದೆ. ಬದುಕಿಗೊಂದು ಬೆಲೆ ದೊರೆಯುತ್ತದೆ. ಒಂದು ಮಹಾತತ್ತ್ವದ ಸಂಪಾದನೆ ಎಷ್ಟು ಕಷ್ಟವೋ ರಕ್ಷಣೆಯೂ ಅಷ್ಟೇ ಕಷ್ಟ ನಿರಂತರ ಜಾಗೃತರಾಗಿದ್ದು ಕಾಯಬೇಕು. ತತ್ವ ಬೆಲೆ ಅರಿತ ವ್ಯಕ್ತಿ ನಿಜಕ್ಕೂ ಜಾಗೃತನಾಗಿರುತ್ತಾನೆ. ಪ್ರಾಣತೆತ್ತಾದರೂ ರಕ್ಷಣೆ ಮಾಡುತ್ತಾನೆ. ಬೆಲೆ ತಿಳಿಯದ ವ್ಯಕ್ತಿ ಕುಸಿದು ಬೀಳುತ್ತಾನೆ. ಆತ್ಮವಿಶ್ವಾಸ ಕಳೆದುಕೊಳ್ಳುತ್ತಾನೆ. ಆತನಿಗೆ ಆತ್ಮ ಗೌರವ ಕನಸಿನ ಗಂಟು. ಆತ್ಮ ನಾಶ ಖಂಡಿತ. ಅವನ ಬದುಕು ನಿರರ್ಥಕ. ಸಮಾಜದಲ್ಲಿ ಆತ ಜೀವಂತ ಶವ. ಗಳಿಕೆ ಉಳಿಕೆ ನಿಜಕ್ಕೂ ಅರ್ಥವತ್ತಾದ ಮಾತು. ಆದ್ದರಿಂದ ಆತ್ಮಗೌರವ ಆತ್ಮೋನ್ನತಿಗೆ ಸಾಧನ. ಈ ಮಹಾತತ್ವದ ಗಳಿಕೆ ಜೀವಿತದ ಧ್ಯೇಯವಾಗಬೇಕು.

